# ಕರ್ಣಾಟಕ ರತ್ನಾವಳೀ ನಾಟಿಕೆ

ಆಸ್ಥಾನಕವಿ

ಅಭಿನವಕಾಳಿದಾಸ, ಬಸವಪ್ಪಶಾಸ್ತ್ರಿಗಳವರಿಂದ

ವಿರಚಿತವಾದುದು







ಮೈಸೂರು
ಗೌರ್ನಮೆಂಟ್ ಬ್ರಾಂಚ್ ಮುದ್ರಾಕ್ಷರಶಾಲೆಯಲ್ಲಿ ಮುದ್ರಿಸಲ್ಪಟ್ಟಿತು
1929

# ಮುನ್ನುಡಿ

ಶ್ರೀಮತ್ಕರ್ಣಾಟಸಿಂಹಾಸನಾಧೀಶ್ವರ ಶ್ರೀ ಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ.ಸಿ.ಎಸ್.ಐ., ಮಹಾಪ್ರಭುಗಳವರು ಸಂಮುಖದ ವಿದ್ವನ್ಮಣಿಗಳಿಂದ ಅನೇಕ ನಾಟಕನಾಟಿಕಾಪ್ರಕರಣಗಳನ್ನು ಕನ್ನಡಕ್ಕೆ ಪರಿವರ್ತನಗೊಳಿಸಿ, ಸ್ವಾಶ್ರಿತನಟವರ್ಗದಿಂದ ರಾಜವಾಸದಲ್ಲಿ ಅಭಿನಯಿಸಿ "ಕರ್ಣಾಟಕ ನಾಟಕ ನಿರ್ಮಾಪಕ" ರೆಂಬ ಅಚ್ಚಳಿಯದ ಬಿರುದನ್ನು ಆರ್ಜಿಸಿದರಷ್ಟೆ? ಅವುಗಳಲ್ಲಿ ಶ್ರೇಷ್ಠತಮವಾದ "ಶಾಕುಂತಲ ನಾಟಕ" ವನ್ನು ಕನ್ನಡಿಸಿದ, ಅಭಿನವ ಕಾಳಿದಾಸ, ಶ್ರೀ|| ಬಸವಪ್ಪಶಾಸ್ತ್ರಿಗಳವರಿಂದ ವಿರಚಿತವಾದ ಈ "ರತ್ನಾವಳೀ ನಾಟಿಕೆಯು" ಮುದ್ರಿತವಾಗದೆ, ಲೇಖಕಪ್ರಮಾದಜನಿತದೋಷಪೂರ್ಣವಾಗಿ ಅರಮನೆಯ ಸರಸ್ವತೀ ಭಂಡಾರದಲ್ಲಿ ಅಡಗಿದ್ದಿತು. ಇದನ್ನು ನಮ್ಮ ಆಳುವ ಮಹಾಸ್ವಾಮಿಯವರು ಪರಿಶೀಲಿಸಿ, ಮುದ್ರಣಗೊಳಿಸಲನುಜ್ಞೆಯಿತ್ತುದರಿಂದ ಸಂಪೂರ್ಣವಾಗಿ ಸಂಸ್ಕೃತ ಗ್ರಂಥವನ್ನನುಸರಿಸದಿದ್ದರೂ ಕೆಲವೆಡೆಗಳಲ್ಲಿ ಇಂದಿನ ರಂಗಸ್ಥಳಕ್ಕೆ ಅನುಕೂಲಿಸುವಂತೆ ಕವಿಯು ಮಾರ್ಪಡಿಸಿರುವ ಕಥಾಭಾಗಗಳನ್ನೇ ಅನುಸರಿಸಿ ಅಕ್ಷರಸ್ಖಾಲಿತ್ಯಾದಿ ದೋಷಗಳನ್ನು ಮಾತ್ರ ಪರಿಶೋಧಿಸಿ ಸಮರ್ಪಿಸಿರುವೆನು.

ಮೈಸೂರು,
ವಿಭವ ಫಾಲ್ಗುನಶುಕ್ಲ ದಶಮಿ.

ನಂಜನಗೂಡು ಶ್ರೀಕಂಠಶಾಸ್ತ್ರಿ,
ಆಸ್ಥಾನವಿದ್ವಾನ್.

ಶ್ರೀ:

# ಕರ್ಣಾಟಕ ರತ್ನಾವಳೀ ನಾಟಿಕೆ

## ಪ್ರಸ್ತಾವನೆ

(ಸೂತ್ರಧಾರನ ಪ್ರವೇಶ)

ವೃತ್ತಂ ॥ ಶ್ರೀಕಾಳೀಮುಖಪುಂಡರೀಕವಿಹರದ್ದೃಕ್ಚಂಚರೀಕದ್ವಯಂ ।
ವೈಕುಂಠಾಬ್ಜಭವೇಂದ್ರವಂದ್ಯಪದನಾಳೀಕಂ ಶ್ರಿತಶ್ರೀಕರಂ ॥
ಪಾಕಾರಾತಿತನೂಜಬಾಣದಕರಂ ಲೋಕೈಕರಕ್ಷಾಕರಂ ।
ಶ್ರೀಕಂಠಂ ಕರುಣಿಕ್ಕೆ ಚಾಮನೃಪಚಂದ್ರಂಗಾಯುರಾರೋಗ್ಯಮಂ ॥

ರಾಗ ॥ ಜುಂಜೋಟಿ ॥ ರೂಪಕ ॥

ಪಾಲಿಸೌ ಶೈಲಬಾಲೆ ನೀಲಕುಂತಲೆ ॥ ಪ ॥
ಕಾಳಿಮಂದಯಾನಜಿತಮರಾಳಿ ಭಜಕಪಾಲಿನಿ ।
ಕೇಳಿಸುಖಿತ ಬಾಲಚಂದ್ರಮೌಳಿ ಸುಗುಣಶಾಲಿನಿ ॥ ೧ ॥
ಚಂಡಮುಂಡ ಮುಖ್ಯದೈತ್ಯ ಮಂಡಲೀನಿಘಾತಿನಿ ।
ಖಂಡಪರಶುಮೋಹಿನೀ ಅಖಂಡಲೇಷ್ಟದಾಯಿನಿ ॥ ೨ ॥
ಸೋಮವಂಶಜಾತ ಚಾಮಭೂಮಿಪಾಲ ಪೋಷಿಣಿ ।
ಶ್ರೀಮಹಾಬಲಾದ್ರಿ ಶಿಖರಧಾಮೆ ಮಂಜುಭಾಷಿಣಿ ॥ ೩ ॥

ಕಂದ ॥ ಬಸವಪ್ಪಶಾಸ್ತ್ರಿಯಿಂದಂ
ಪೊಸತೆನೆ ಕನ್ನಡದೊಳುಸಿರ್ದ ರತ್ನಾವಳಿಯಂ ।
ರಸಿಕರ್ಕಳೆನಿಸಿದೀ ಸಾ
ಧುಸಭಾಸದರೊಲ್ದು ಮೆಚ್ಚಲಾನಭಿನಯಿಪೆಂ ॥

ಇನ್ನು ಮನೆಗೆ ಹೋಗಿ ನನ್ನ ಮಡದಿಯನ್ನು ಕರೆದುಕೊಂಡು ಬಂದು ಸಂಗೀತವನ್ನಾರಂಭಿಸುವೆನು. (ತೆರೆಯಕಡೆ ನೋಡಿ) ಇದೇ ನನ್ನ ಮನೆ; ಪ್ರವೇಶಿಸುವೆನು. (ಪ್ರವೇಶಿಸಿ) ಆರ್ಯೆ! ಇತ್ತ ಬಾ.

ನಟಿ—(ಬಂದು) ಆರ್ಯನೆ! ಬಂದಿರುವೆನು, ಮಾಡತಕ್ಕ ಕಾರ್ಯವನ್ನಾಜ್ಞಾಪಿಸಬೇಕು.

ಸೂತ್ರಧಾರ—ಆರ್ಯೆ! ಈ ಸಭಾಸದರು ರತ್ನಾವಳೀನಾಟಿಕೆಯನ್ನು ನೋಡಲು ಆಸಕ್ತರಾಗಿರುವುದರಿಂದ ಅಲಂಕರಿಸಿಕೊಂಡು ಸಿದ್ಧಳಾಗು.

ನಟಿ—(ಚಿಂತಿಸಿ) ಆರ್ಯನೆ! ನೀನಂತೂ ನಿಶ್ಚಿಂತನು. ಆದುದರಿಂದ ನರ್ತಿಸದೆ ಹೇಗಿದ್ದೀಯೆ? ಮಂದಭಾಗ್ಯಳಾದ ನನಗಾದರೋ ಒಬ್ಬಳೇ ಮಗಳು. ನೀನು ಅವಳನ್ನು ದೇಶಾಂತರದ ವರನಿಗೆ ಕೊಡಲು ನಿಶ್ಚಯಿಸಿರುವೆ. ದೂರದೇಶದವನಾದ ಆ ವರನೊಡನೆ ಮದುವೆ ಹೇಗಾಗುವುದೊ ಎಂಬ ಚಿಂತೆಯಿಂದ ನನ್ನ ಬುದ್ಧಿಯೇ ಮುಂದಕ್ಕೆ ಹಾಯುವುದಿಲ್ಲ. ಇನ್ನು ನಾನು ಹೇಗೆ ನರ್ತಿಸಲಿ?

ಸೂತ್ರಧಾರ—ದೂರದೇಶದವನೆಂದು ಏತಕ್ಕೆ ಕಳವಳಪಡುವೆ? ಕೇಳು—

ಕಂದ ‖ ಶರಧಿಯ ನಡುವೇಂ ದ್ವೀಪಾಂ
ತರಮೇಂ ಮೇಣಾದಿಗಂತಮೇನಂತವರಿಂ ।
ಭರದಿಂ ಸೆಳೆತಂದೀವುದು
ಪರಿಕಿಪೊಡಭಿಮುಖಮೆನಿಪ್ಪ ವಿಧಿಯಭಿಮತಮಂ ‖

(ತೆರೆಯಲ್ಲಿ) ಭಾಪು! ಭರತಪುತ್ರ! ಭಾಪು. ಅದಕ್ಕೆ ಸಂದೇಹವೇನು?

("ಶರಧಿಯನಡುವೇಂ" ಎಂಬ ಕಂದವನ್ನು ಮಂತ್ರಿಯು ಹೇಳುವನು.)

ಸೂತ್ರಧಾರ—(ಕೇಳಿ) ಆರ್ಯೆ! ಇನ್ನೂ ಏಕೆ ತಡೆಮಾಡುವೆ? ಇದೊ, ನನ್ನ ತಮ್ಮನು ಯೌಗಂಧರಾಯಣನ ವೇಷವನ್ನು ಹಾಕಿಕೊಂಡು ಬಂದೇ ಬಂದನು. ನಾವು ಮುಂದಿನ ವೇಷವನ್ನು ಧರಿಸಲು ಸಿದ್ಧರಾಗೋಣ ನಡೆ.

(ಎಂದು ಹೋಗುವರು)

---

# ಮೊದಲನೆಯಂಕಂ

(ಸಮುದ್ರದಲ್ಲಿ ದೋಣಿಯೊಳಗೆ 'ರತ್ನಾವಳಿ' ರತ್ನಶ್ರೇಷ್ಠಿ, ನಾವಿಕರು ಸಹ ಪ್ರವೇಶ)

ರಾಗ ॥ ತಾಳ ॥

ನಾವಿಕರು—ನಿಲ್ಲಿರಿ ನಿಲ್ಲಿರಿ । ಮೆಲ್ಲನೆ ತಳ್ಳಿರಿ । ತಲ್ಲಣಿಸುವಳೀನಾರಿ ।
ಕಲ್ಲಿದೆ ತಡೆಯಿರಿ । ತಳ್ಳದಿರಿತ್ತಲು । ಬೀಳುವಳಿದೊಜಾರಿ ॥ ೧ ॥
ಕಡಲಿನ ತಡಿಯನು । ಅಡರಿತು ನಾವೆಯು । ತಡವಿನ್ನೇತಕೆ ಪೋಗೆ ।
ಅಡಿಯಿಡೆ ಮುಂದಕೆ ಗಡಬಿಡಿ ಏತಕೆ । ತಡವಿಲ್ಲವು ಸಾಗೆ ॥ ೨ ॥
ತೀರಕೀ ನಾರಿಯು । ಸೇರಿದಮಾತ್ರದೆ । ಭೂರಿಸಂತೋಷವು ತೋರಿತೀಗ ।
ತೆರಳಿರಿ ತೆರಳಿರಿ ಬಲುಬೇಗ । ದೊರೆಯುವುದುಡುಗೊರೆ ನಮಗೀಗ ॥ ೩ ॥

(ಎಲ್ಲರೂ ದಡವನ್ನು ಹತ್ತುವರು)

ರತ್ನಶ್ರೇಷ್ಠಿ—ಎಲೈ ನೌಕಾಧ್ಯಕ್ಷನೇ! ಪ್ರಯಾಣದಲ್ಲಿ ನೀನು ತುಂಬಾ ಶ್ರಮಪಟ್ಟಿರುವೆ. ಇದೊ. ನಿನ್ನ ಸಾಹಸಕ್ಕೆ ತಕ್ಕ ಬಹುಮಾನವನ್ನು ತೆಗೆದುಕೊ (ಕೊಟ್ಟು) ಇನ್ನು ಈ ರಾಜಪುತ್ರಿಯನ್ನು ಇಲ್ಲಿನ ಮಂತ್ರಿಶ್ರೇಷ್ಠನಾದ ಯೌಗಂಧರಾಯಣನಿಗೆ ಒಪ್ಪಿಸುವೆನು. ಎಲಾ ರಾಜಪುತ್ರಿ! ಹೆದರಬೇಡ, ನಿನ್ನನ್ನು ಗೌರವಕ್ಕೆ ಯೋಗ್ಯವಾದ ಸ್ಥಳಕ್ಕೆ ಸೇರಿಸುವೆನು. ಬಾ, (ಎಂದು ಕರೆದುಕೊಂಡು ಹೋಗುವನು).

ರಾಗ ॥ ನೋಟು ॥

ನಾವಿಕರು—ಬಲುಹರಿಸವು ಸಮ । ನಿಸಿತೆಮಗೀಗಳ್ ।
ತಳುವುದೆ । ಅಡಿಯಿಡು । ನಿಳಯಕೆ ಪೋಗಲ್ ॥
ತಡೆಯದೆ ಸಾರಿ । ಮಡದಿಯ ಸೇರಿ । ಉಡುಗೊರೆ ।
ಯನಿದನು । ಕುಡೆನಲವೇರಿ । ನಡೆನಡೆ । ನಡೆ ।
ಅಡಿಯಿಡು ಬೇಗಾ । ಪಡೆ ಪಡೆ ಪಡೆ ।
ಸಂಭ್ರಮವನು ಈಗ । ಕೊಡು ಕೊಡು ನಡೆಯಲು
ಶಪಥವ ಬೇಗ । ಬಿಡು ಬಿಡು ನಮಗಿದೆ । ಸು
ರಪನ ಭೋಗ ॥ (ಎಂದು ತೆರಳುವರು)

(ಯೌಗಂಧರಾಯಣನ ಮನೆ)

ರತ್ನಶ್ರೇಷ್ಠಿ—ಆಃ! ಇದೇ ಮಂತ್ರೀಶ್ವರನ ಮನೆ. (ರತ್ನಾವಳಿಯೊಡನೆ ಪ್ರವೇಶಿಸುವನು).

ಕಂಚುಕಿ—(ನೋಡಿ ಸ್ವಗತಂ) ಓಹೋ! ನಮ್ಮ ಕೌಶಾಂಬೀ ವರ್ತಕನಾದ ರತ್ನಶ್ರೇಷ್ಠಿ ಬಂದಿರುವನು. (ಪ್ರಕಾಶ) ಸಾಹುಕಾರರೆ! ಇದೇನು ಅಪೂರ್ವವಾದ ಆಗಮನ?

ರತ್ನ—ಮಂತ್ರೀಶ್ವರನನ್ನು ಕಾಣಬೇಕಾಗಿರುವುದು. ದಯೆಯಿಟ್ಟು ನಾನು ಬಂದಿರುವ ಸಂಗತಿಯನ್ನು ಶ್ರುತಪಡಿಸು.

ಕಂಚುಕಿ—ಓಹೋ! ಈಗ ಮಂತ್ರಿಶ್ರೇಷ್ಠನನ್ನು ಕಾಣುವುದು ಬಹು ಕಷ್ಟ. ನಮ್ಮ ಮಹಾರಾಜನ ಪತ್ನಿಯಾದ ವಾಸವದತ್ತಾದೇವಿಯು ಪೂಜಿಸುವ ಮನ್ಮಥಮಹೋತ್ಸವಕ್ಕಾಗಿ ಆತನು ಮಕರಂದೋದ್ಯಾನವನ್ನು ಶೃಂಗಾರಮಾಡಿಸುವ ಸಡಗರದಲ್ಲಿರುವನು. ಆದರೂ ಸಮಯವನ್ನು ತಿಳಿದು ಬರುವೆನು. ಈಕೆ ಯಾರು?

ರತ್ನ—ಈಕೆಯು ದ್ವೀಪಾಂತರವಾಸಿಯಾದ ಸಿಂಹಳೇಂದ್ರನ ಪುತ್ರಿ.

ಕಂಚುಕಿ—ಏನು? ಈಕೆ ರಾಜಪುತ್ರಿಯೆ? ಸಾಹುಕಾರರೆ! ಇದೇನು ನೀವು ಹೇಳುವುದು ಆಶ್ಚರ್ಯವಾಗಿ ತೋರುವುದು. ರಾಜಪುತ್ರಿಯಾದ ಈಕೆಯು ಸ್ವಜನಗಳನ್ನು ಬಿಟ್ಟು ನಿಮ್ಮೊಡನೆ ವಿಹರಿಸುವುದಕ್ಕೆ ಕಾರಣವೇನು?

ರತ್ನ—ಅಯ್ಯಾ! ಈಕೆಯ ದುರ್ದಶೆಯು ನಿನ್ನ ದುರಭಿಪ್ರಾಯಕ್ಕೆ ತಕ್ಕುದಾಗಿಯೇ ಇರುವುದು. ಆದರೂ ಕೇಳು; ತಂದೆಯ ಆಜ್ಞಾನುವರ್ತಿನಿಯಾದ ಈಕೆಯು ಕಾರ್ಯಾಂತರದಿಂದ ಪ್ರಯಾಣ ಬೆಳೆಯಿಸುತ್ತಿರುವಾಗ ಸಮುದ್ರಮಧ್ಯದಲ್ಲಿ ಹಡಗೊಡೆದು ಏಕಾಂಗಿನಿಯಾದಳು. ಆಕಸ್ಮಿಕವಾಗಿ ಸಿಕ್ಕಿದ ಮುರಿದ ಹಡಗಿನ ಹಲಗೆಯೊಂದರಮೇಲೆ ತೇಲುತ್ತಿದ್ದ ಈಕೆಯನ್ನು ಸಮರ್ಥರಾದ ನಾವಿಕರ ಸಹಾಯದಿಂದ ನನ್ನ ಹಡಗಿನಲ್ಲಿ ಕುಳ್ಳಿರಿಸಿಕೊಂಡು ಇಲ್ಲಿಗೆ ಕರೆತಂದೆನು ಈಕೆಯನ್ನು ಸ್ವಸ್ಥಳಕ್ಕೆ ಸೇರಿಸಲು ಮಂತ್ರೀಶ್ವರನೊಡನೆ ಮಾತನಾಡಬೇಕೆಂದು ಇಲ್ಲಿಗೆ ಬಂದೆನು.

ಕಂಚುಕಿ—(ರತ್ನಾವಳಿಯನ್ನು ನೋಡಿ ಸ್ವಗತ) ಈಕೆಯ ಸೌಂದರ್ಯವನ್ನೂ ಮುಗ್ಧಭಾವವನ್ನೂ ನೋಡಿದರೆ ರಾಜಪುತ್ರಿಯಂತೆಯೇ ತೋರುವುದು. ಈಕೆಯ ಕಂಠದಲ್ಲಿರುವ ರತ್ನಹಾರವು ಸಾಮಾನ್ಯ ಸ್ತ್ರೀಯರು ಧರಿಸತಕ್ಕುದಲ್ಲ. ಅಯ್ಯೋ ಪಾಪ! ಈಕೆಯ ದುರ್ದಶೆಯು ಬಹಳ ಶೋಚನೀಯವಾದುದು! (ಪ್ರಕಾಶ) ಅಯ್ಯಾ, ನಿಮ್ಮ ಆಗಮನವನ್ನು ಮಂತ್ರೀಶ್ವರರಿಗೆ ತಿಳಿಸಿ ಬರುವೆನು, ಅವರೆಗೂ ಇಲ್ಲಿಯೇ ಕುಳಿತಿರಿ (ಎಂದು ಹೋಗುವನು).

ರತ್ನಾವಳಿ—ಹಾ ಹಾ ದೈವವೆ! ನಿರ್ಭಾಗ್ಯಳಾದ ನಾನು ಮಾತಾಪಿತೃಗಳ ವಿಯೋಗವನ್ನು ಹೊಂದಿದುದೂ ಅಲ್ಲದೆ, ಅಪರಿಚಿತರ ಮನೆ ಬಾಗಿಲಲ್ಲಿ ದಿಕ್ಕುಗೆಟ್ಟು ಅಲೆಯುವಂತಾಯಿತಲ್ಲಾ.

ರಾಗ ॥ ಭೈರವಿ ॥ ತಾಳ ॥

ವಿಧಾತ ಎನ್ನನೀಪರಿ । ಅದೇಕೆ ಹಿಂಸೆ ಗೈವೆಯ್ಯೊ ॥ಪ॥
ಮದೀಯ ದುಃಖ ಮಿಂತಿದಂ । ಅದಾರಿಗೆ ಪೇಳು
ವೆನೇಗತಿ । ಸ್ವದೇಶಕೈದೆ ಸೇರಲು । ಅದೇನ ಗೈ
ವುದೊ ಕಾಣೆನೇ ಹಾ ॥೧॥ ವಿವಾಹಕೆಂದು ಬಂದನಾಂ ।
ವಿದೇಶದೊಳ್ಳೋರ್ವಳೇ ನಿಂತೆನೇ । ವಿಯೋಗವೊಂದು
ತೆಲ್ಲರಂ । ವಿನಾಶಕೆ ಗುರಿಯಾದೆನೆ ॥೨॥

ಕಂಚುಕಿ—ವರ್ತಕರೇ! ಬೇಗ ಬನ್ನಿ. ಮಂತ್ರೀಶ್ವರನು ನಿಮ್ಮನ್ನೇ ಈಗ ಇದಿರುನೋಡುತ್ತಲಿರುವನು.

ರತ್ನ—ಎಲಾ ರಾಜಪುತ್ರಿ! ಬೇಗ ನಡೆ. ಭಗವಂತನು ನಿನ್ನ ಕಷ್ಟವನ್ನು ನಿವಾರಿಸಿ ಇಷ್ಟಜನರೊಡನೆ ಸೇರಿಸುವನು (ಎಂದು ಹೋಗುವರು).

(ಮಂತ್ರಿ ಯೌಗಂಧರಾಯಣನ ಪ್ರವೇಶ)

ಯೌಗಂಧರಾಯಣ—"ಶರಧಿಯನಡುವೇಂ"
(ಎಂಬ ಕಂದವನ್ನು ಹಾಡಿ)

ಹಾಗೆಯೇ ಸರಿ. ಹಾಗಿಲ್ಲದಿದ್ದರೆ ಸಿದ್ಧಪುರುಷನು ಹೇಳಿದುದನ್ನು ನಂಬಿ ನಮ್ಮ ಮಹಾರಾಜನಿಗಾಗಿ, ನಾನು ಪ್ರಾರ್ಥಿಸಿದ ಆ ಸಿಂಹಳೇಂದ್ರನ

ಪುತ್ರಿಯು ಹಡಗೊಡೆದು ಸಮುದ್ರದಲ್ಲಿ ಮುಳುಗಿದಾಗ ಆಕೆಗೆ ಹಲಗೆ ಸಿಕ್ಕುವುದೆಂದರೇನು ? ಆ ಹಲಗೆಯ ಮೇಲೆ ತೇಲುತ್ತಿದ್ದ ಆಕೆಯನ್ನು ನಮ್ಮ ಕೌಶಾಂಬಿಯ ವರ್ತಕನು ಕಂಡು ರತ್ನಮಾಲಿಕೆಯ ಗುರುತಿನಿಂದ, ರಾಜಪುತ್ರಿಯೆಂದರಿತು ಇಲ್ಲಿಗೆ ಕರೆತರುವುದೆಂದರೇನು ? ಸರ್ವಪ್ರಕಾರದಿಂದಲೂ ನಮ್ಮ ಮಹಾರಾಜನಿಗೆ ಅಭ್ಯುದಯಗಳು ಸೇರುವ ವಿಷಯದಲ್ಲಿ ಸಂಶಯವೇ ಇಲ್ಲ. (ಯೋಚಿಸಿ) ಇದಲ್ಲದೆ ಆಕೆಯನ್ನು ದೇವಿಯ ಹಸ್ತದಲ್ಲಿ ಸಮರ್ಪಿಸಿದುದು ಯುಕ್ತವೇ ಆಯಿತು. ನಮ್ಮ ಬಾಭ್ರವ್ಯನೆಂಬ ಕಂಚುಕಿಯು ಸಿಂಹಳೇಂದ್ರನ ಮಂತ್ರಿಯಾದ ವಸುಭೂತಿಯೊಡನೆ ಬಹು ಕಷ್ಟಪಟ್ಟು ಸಮುದ್ರವನ್ನುತ್ತರಿಸಿಬಂದು, ಕೋಸಲದೇಶದ ವಿಜಯಕ್ಕಾಗಿ ಹೋದ ರುಮಣ್ವಂತನೆಂಬ ಸೇನಾಪತಿಯೊಡನೆ ಸೇರಿದನೆಂದು ಕೇಳಿದೆನು. ಆಹಾ! ಇಷ್ಟು ಪ್ರಯೋಜನ ಕೈಸೇರಿದ್ದರೂ ನನ್ನ ಮನಸ್ಸಿಗೆ ತುಷ್ಟಿಯುಂಟಾಗದಿರುವುದು. ಲೋಕದಲ್ಲಿ ಭೃತ್ಯಭಾವವೇ ಕಷ್ಟ ;

ಕಂದ ॥ ಅರಸಂಗಭ್ಯುದಯಕ್ಕಾ
ಕರಮೆನಿಪುದು ಕಾರ್ಯಮಿದಕೆ ದೈವಂ ನೆರವಾ ।
ಗಿರುತಿರ್ಪುದಾದೊಡಿದನೆ
ಮ್ಮೆರೆಯಂಗರಿಯಿಸದೆ ಗೈದೆನೆಂದಳುಕಿದಪೆಂ ॥

(ತೆರೆಯಲ್ಲಿ ಕೋಲಾಹಲವಾಗುವುದು)

ಯೌಗಂಧ—(ಕೇಳಿ) ಇದೊ, ಗೀತವಾದ್ಯಗಳಿಂದ ಮನೋಹರವಾದ ಪುರಜನರ ಚರ್ಚರೀ ಧ್ವನಿಯು ಮೊಳಗುತ್ತಿರುವುದು. ಅದರಿಂದ ಮದನಮಹೋತ್ಸವ ಮಗ್ನರಾದ ನಾಗರಕರ ಸಂತೋಷವನ್ನು ನೋಡಲು ಮಹಾರಾಜನು ಸೆಜ್ಜೆಗೆ ನಡೆತಂದನೆಂದೂಹಿಸುತ್ತೇನೆ. (ಮೇಲೆ ನೋಡಿ) ಇದೊ, ಮಹಾರಾಜನು ಸೆಜ್ಜೆಯನ್ನು ಅಲಂಕರಿಸಿಯೇ ಇರುವನು ;

ಕಂದ ॥ ಭುವನಮನೋಜ್ಞಂ ವಿಶ್ರಾಂ
ತಿ ವಿಗ್ರಹಂ ಪ್ರಿಯವಸಂತಕಂ ರತಿಯುತನೀ ।

ಯವನಿಪತಿ ನೋಡಲಾತ್ಮೋ
ತ್ಸವಮಂ ನಡೆತಂದ ಕಾಮನೆನೆ ಕಂಗೊಳಿಪಂ ॥

ಇನ್ನು ನನ್ನ ಕಾರ್ಯಕ್ಕಾಗಿ ಹೋಗುವೆನು.

(ಸೆಜ್ಜೆಯಮೇಲೆ ಉದಯನರಾಜನು ವಿದೂಷಕನೊಡನೆ ಪ್ರವೇಶ)

ವೃತ್ತಂ ॥ ಅರಿಗಳ್ ನಿರ್ಜಿತರಾದರೆನ್ನ ಭರವೆಲ್ಲಂ ಸಜ್ಜನಾಮಾತ್ಯನ ।
ಲ್ಲಿರಿಸಲ್ಪಟ್ಟುದು ಸಾಧುಪಾಲನೆಯಿನಾತ್ಮೀಯಂ ಪ್ರಜಾಪಾಳಿಯಾ ॥
ದರಿಸಲ್ಪಟ್ಟುದು ದೇವಿಯುಂ ಸಖನೆನೀನುಂ ಚೈತ್ರನುಂ ಪೊರ್ದಿರ ।
ಲ್ಕೆರೆದೀಯುತ್ಸವಮೆನ್ನದೈದುಗೆ ಮನೋಜಂ ನಾಮದಿಂ ತುಷ್ಟಿಯಂ ॥

ವಿದೂಷಕ—ಎಲೈ ಮಿತ್ರನೇ! ಇದೇನು ಹೀಗೆ ಹೇಳುವೆ? ಇದು ನಿನ್ನದೂ ಅಲ್ಲ. ಕಾಮದೇವನದೂ ಅಲ್ಲ. ನನ್ನದು.

ಪುರಜನರು—॥ಪಲ್ಲವಿ॥
(ವರಮಧುಸಮ ॥) ಎಂದು ಹೇಳುವರು.

ವಿದೂ—ಮದನಮಹೋತ್ಸವದಿಂದ ಸೊಕ್ಕಿ ವಿಹರಿಸುವ ಪುರಜನರ ವಿಲಾಸವನ್ನು ನೋಡು ನೋಡು.

ರಾಗ ॥ ಕೇದಾರಗೌಳ ॥ ತಾಳ ॥

ರಾಜ—ಎಂತುನಾಂ ವಸಂತ ವರ್ಣಿಪೆಂ । ಈ
ಕಂತೂತ್ಸಾಹವ ॥ ಪ ॥
ಕಾಂತೆಯರೀ । ಕಾಂತರುಮನ । ಕಾಂತಿರು
ತಿಹ ! ಸಂತೋಷವ ॥ ಅ ॥
ಕೊಂಬಿನಂಡೆಯೊಳಂಬುಧಾರೆಯು । ತುಂಬಿ
ಕಾಂತರು । ನೆರೆ । ದಿಂಬುಗೊಂಡು ಪೊಯ್ಯೆ
ನೆನೆದು । ಹಂಬಲಿಪೀ ನಿತಂಬಿನಿಯರ ॥ ೧ ॥
ಸೂಸಿದೀಪಟ । ವಾಸಧೂಳಿಯು । ಸೌಸ
ವಂ ಮಿಗೆ । ತವೆಭಾಸಿಸುತ್ತ ಧನದಪುರವ ।
ಹಾಸಗೈವ ಕೌಶಾಂಬಿಯು ॥ ೨ ॥

ವಿದೂ—ಮಿತ್ರನೇ! ಇತ್ತ ನೋಡು. ಮದನಮಹೋತ್ಸವಾಸಕ್ತರಾದ ಪುರಜನರು ಸಪತ್ನೀಕರಾಗಿ ಬಹು ಸಂಭ್ರಮದಿಂದ ವಿಹರಿಸುತ್ತಾ ಬರುತ್ತಿರುವರು.

ಪುರಜನರು__(ಪ್ರವೇಶಿಸಿ) ‖ ರಾಗ ‖

ಗಂಡಸರು—ವರಮಧುಸಮಯದ ಸಿರಿ । ಮೆರೆದಪುದು ‖ ಪ ‖
ವಿರಹಿ ಜನಂಗಳ್ ವಿಷಮವಿಶಿಖನಿಂ । ವಿಕಾರಮಾಂ
ತ್ಮೈತರುತಿಹರು । ತರುಣಿಯರುಡೆಯಂ ।
ನೆರೆಚದುರಿಸುತಂ । ಕರೆಕರೆವಡಿಸಿ ।
ಚರಿಸುವನನಿಲಂ । ನಿರುಕಿಸುರಮಣಿ ‖ ೧ ‖

ಹೆಂಗಸರು—ಕರತಳದೊಳಗಾಂ । ತಿರುತಿಹ ಕುಸುಮಂ ।
ಸುಗಂಧ ವೀಳ್ಯಂ ಮೆರೆಯುತಿರೆ । ಬರೆತಡ
ವನುಗ್ಯೆ । ದರಸಿಯರುಗಳಂ । ಜರಿಯುತೆ
ವಿಟರು ।ಅರಸುತಲಿದೊ ಸಂ ।ಚರಿಪರು ರಮಣಿ ‖ ೨ ‖

ಗಂಡಸರು—ಅದೋಬರುವರರಸಿಯ ಸಖಿಗಳ್ ।
ಅನಂಗರಸದಭಿನಯ ಮುಖಿಗಳ್ ।
ನರೇಶವಧುಗಳ್ ಬರುವೆಡೆಯೋಳ್ ।
ಇರಲ್ ಸಲದು ಬಾಬಾಪೋಪಂ ‖ ೧ ‖

ಪುರಜನರು—(ಎಂದು ಸ್ತ್ರೀಯರೊಡನೆ ವಸಂತವಾಡುತ್ತಾ)

(ಸಕಲರೂ)—ರಾಗ ‖ ನೋಟು ‖ ಏಕತಾಳ ‖

ವರವಸಂತಸರಸವಿದು । ಧರೆಗೆತಿಹಿತವೆನಿಸಿಹುದು ‖ ಪ ‖

ಗಂಡಸರು—ಜವಾಜಿ ಕರ್ಪೂ । ರದೆ ಬೆರದೀ । ನವಾಂಬು
ವಂ ಕೈಕೊಳು ಜವದಿ ‖ ೧ ‖

ಹೆಂಗಸರು—ಮನೋಜಶರಕಿದು ಸಮವಿನಿಯಾ ।
ಮನೋಧೃತಿಯುನಿದ ತಡೆದಪೆಯಾ ‖ ೨ ‖

ಗಂಡಸರು—ಸುಮಂ ಗಿರೀಂದ್ರನನಳುಕಿಪುದೇ ।
ಹಿಮಂ ಸಮುದ್ರನ ತುಂಬಿಪುದೇ ‖ ೩ ‖

ಹೆಂಗಸರು—ವಿಲಾಸಿನಿಯುಗೆಲೆ ಸುಲಭವೆಕೇಳ್ ।
ವಿವೇಕತನದೊಳು ತಳುವದೆಪೇಳ್ ‖ ೪ ‖

ಗಂಡಸರು—ಅದೇಕೆ ಕಾಂತೆ ನಡುಗಿದಪೇ ।
ಮದೇಭಯಾನೆ ದಡದಡಿಪೇ ‖ ೫ ‖

ಹೆಂಗಸರು—ವಿವರ್ಣವಾಯ್ತ್ತೀತಕೆ ಮೊಗವು ।
ನವೀನವಿಂತಿವು ಸೋಜಿಗವು ‖ ೬ ‖

ಗಂಡಸರು—ಮದಾಂಧಳಂತುರೆ ನುಡಿದಪೆಯಾ ।
ಇದಿರ್ನಿಲಲ್ ನೀನಿದಿರಿಪೆಯಾ ॥ ೭ ॥
(ಅಟ್ಟಿಸಿಕೊಂಡು ಹೋಗುವರು)

ವಿದೂ--ಎಲೈ ಮಹಾರಾಜನೇ, ಇದೊ ನೋಡು, ಮದನಿಕೆಯು ಮದನರಸವನ್ನಭಿನಯಿಸಿಕೊಂಡು ಚೂತಲತೆಯೊಡಗೂಡಿ ನರ್ತಿಸುತ್ತಾ ಬರುತ್ತಿರುವಳು.

(ಹಾಡುತ್ತಾ ಮದನಿಕೆ ಚೂತಲತೆಯರ ಪ್ರವೇಶ)

ರಾಗ ॥ ವಿಲಾಸ ॥

ಮದನಿಕೆ—ವರಚೈತ್ರಮಾಸದ ಸೌಖ್ಯದ ।
ಪರಿಯನಾನೇಂ ವರ್ಣಿಪೇಂ ॥ ಪ ॥
ವಿರಹಿವ್ರಜಂಗಳ ಬಾಧಿಪನು ।
ಸುಮಶರನು । ಕಲಕಂಠಾರವೆ ॥ ೧ ॥
ಚೂತಲತೆ—ತರುಣೀಜನಂಗಳ ಮನದಮಾನವ ।
ಪರಿದುಃಖೀಸುವನಂಗನೇ ।
ಸ್ಮರದೂತನಂದದಿ ಮಲಯಮಾರುತನಿರನೆ ।
ಸರಸಿರುಹಾನನೆ ॥ ೨ ॥
ಮದನಿಕೆ—ಬರದಿರ್ಪ ಕಾಂತೆಯರನ್ನ ಹುಡುಕುತ
ತರುಣಿಮಣಿ ಜವ್ವನಿಗರು । ಪರಿದೋ
ಡುತಿರ್ಪರು । ಪರಿಮಳಾಂಚಿತ ಸರಸ
ವಕುಳ ಸುಮಾಲ್ಯರು ॥ ೩ ॥

ರಾಗ ॥ ಖರಹರಪ್ರಿಯ ॥ ರೂಪಕ ॥

ರಾಜ— ನಿರುಕಿಸೈ ವಸಂತಕನೆ । ಮೆರೆವೀಮದನೋ
ತ್ಸವವಂ ಸಖನೇ ॥ ಪ ॥
ತರುಣೀಮಣಿಯರ ಕುಣಿತದ ಸಡಗರ
ದೊಳು । ಸಿರಿಮುಡಿಯಿಂ ಜರುಗುತೆಕುಸು
ಮದ ಸರಮಡಿದಳಿರಂ । ತೊಡರಲ್ ಘಲು
ಘಲ್ ಘಲ್‌ಘಲಿರೆನ । ಲಂದುಗೆಗಳಿನಿದೊ
ಪದಯುಗಮೆಸೆವುದು ॥ ೧ ॥

ಪಿರಿದಾಗಿ ಕುಚಭರವನುತೋರೆ ತನಗ
ರಿದೆನುತಳಲಿಂ । ಸರವಿರೆ ನಡುವದನ
ತಿಮುದದೊಳು। ಸಂತವಿಪಂದದಿ ನೊಲೆದಾ
ಡುತರವುಣಿಯು ಕಂಧರದೊಳಗಿದೊ
ಮಣಿಸರಮೆಸೆವುದು ॥ ೨ ॥

(ಮದನಮಹೋತ್ಸವಾಸಕ್ತೆಯರಾದ ಪೌರಸ್ತ್ರೀಯರು
ನರ್ತಿಸುತ್ತಾ ಪ್ರವೇಶ)

ಸ್ತ್ರೀಯರು—ಹೂವಿನಹಬ್ಬವ ನೀವೇಳುವೆ ಸಖಿ ।
ಭಾವ ಭಾಮುಗಿದು ಚಂದ್ರಮುಖಿ
ಜೀವಿತವೆನಿಸುವು । ದೀವುದು ವಿಜ
ಯವ । ಭಾವೆಕೇಳಾ ಕೋಕಿಲಾರವೆ ॥ ೧ ॥
ಏರಿ ನೂತನ । ಕೀರವರೂಢವ ।
ತೋರಮಾವಿನ ತಳಿರಂಬಿನೊಳು ।
ಮಾರವೀರನು । ಸಾರಿವಿಯೋಗಿಯ ।
ಗಾರುಗೊಳಿಪನು ನೀ ಕೇಳೌ ॥ ೨ ॥

* ॥ ರಾಗ ॥

ಸುರಭಿ ಇದು ಶೋಭಿಪುದು । ಸಾರಸನೇತ್ರೆ ।
ಪರಭೃತಕಲಕಂಠರಾವ । ಸುರುಚಿರವಾಗಿ ॥ ಪ ॥
ಸುಂದರಿಮಾಕಂದದ । ಚಂದಳಿರ್ಗಳ ಚಂದವಿದು ।
ಪದೆದು । ಮುದವ।ನೊದವಿ । ಪುದಿದು । ಹೃದಯಕೆ ನೋಡೆ ॥ ೧ ॥
ನಲ್ಲೆಯರೀಮಲ್ಲಿಗೆ । ಬಳ್ಳಿಯ ಮುಗುಳೆಲ್ಲವನು ।
ಬಿಡದೆ । ಬಿಡಿಸಿ । ಮುಡಿಗೆ । ಮುಡಿವ । ಸಡಗರದಿಂದ ॥ ೨ ॥
ಈಗಲೆ ಸಂಭೋಗಕೆ । ರಾಗಿಸುತಲಿಯೋಗಿಗಳು ।
ತರುಣಿ । ಯರನು । ಬೆರೆವ । ಪರಿಯು । ನಿರುಕಿಸುನೀರೇ ॥ ೩ ॥
(ನರ್ತಿಸುತ್ತಿರುವರು.)

ವಿದೂ—ಇವರ ನಡುವೆ ನಾನೂ ಸ್ವಲ್ಪ ಕುಣಿದು ಮದನ ಮಹೋತ್ಸವಕ್ಕೆ ಮನ್ನಣೆ ಮಾಡಿ ಬರುವೆನು.

ರಾಜ—ಹಾಗೆಯೇ ಮಾಡು.

ವಿದೂ—(ಚೇಟಿಯರ ನಡುವೆ ಕುಣಿಯುತ್ತಾ)

॥ ರಾಗ ॥

ಕಲಿಸಿಕೊಡೆನಗಿದ । ಕಾಂತಾಮಣಿ ।
ಕಲ್ಯಾಣಿ । ಸುಶ್ರೋಣಿ । ಕನ್ಯಾಗ್ರಣಿ ॥ ಪ ॥
ಕಠೋರಕುಚೆನಿಜ । ನಟನಕಂಗಜನ ।
ಮಿಠಾರಿ । ಕಠಾರಿ । ಮೆಚ್ಚಿದೆನು ಸುವದನೇ ॥ ೧ ॥
ಜಾತಿಕೋಮಲೆಮನ । ಸೋತೆನು ಅಂಗಜನ ।
ಮಾತಂಗಿ । ಲತಾಂಗಿ । ತೋರಿಕೊಡ । ದೊಡೆ ಬಿಡೆ ॥ ೨ ॥
ಅಚ್ಚರಿಯಾಗಿಹ । ಚರ್ಚರಿಯನುಕೇಳಿ ।
ಮೆಚ್ಚಿದೆ । ನಚ್ಚಿದೆ । ಮಚ್ಚರವೆ । ಬಿಡುಬಿಡು ॥ ೩ ॥

(ಮಧ್ಯದಲ್ಲಿ ನರ್ತಿಸುವನು.)

ಮದನಿಕೆ—(ನಕ್ಕು) ಮುಗ್ಧನೇ! ಇದು ಚರ್ಚರಿಯಲ್ಲ. ದ್ವಿಪದೀ ಖಂಡವು.

ವಿದೂ—ಓಹೋ! ಇದು ಖಂಡವಾದರೆ ಇದರಿಂದ ಹೂರಣ ಗಡಬು ಮಾಡಬಹುದಲ್ಲವೆ?

ಮದ—(ನಕ್ಕು) ಅಲ್ಲ ಅಲ್ಲ.

ವಿದೂ—ಹಾಗಾದರೆ ಇನ್ನೇನು?

ಮದ—ಇದು ಹಾಡತಕ್ಕುದು.

ವಿದೂ—(ವ್ಯಸನವನ್ನು ನಟಿಸಿ) ಸಾಕುಸಾಕು. ಹಾಡುವುದೆಂದರೆ ತಲೆನೋವು ಬರುವುದು. ಬಿಡು ಬಿಡು. ನನ್ನ ಮಿತ್ರನ ಸಮೀಪಕ್ಕೆ ಹೋಗುವೆನು. (ಹೊರಡುವನು)

ಮದ—(ವಿದೂಷಕನ ಉತ್ತರೀಯವನ್ನು ಹಿಡಿದೆಳೆದು) ಎಲೈ ಪರಿಹಾಸಕನೇ! ಬಾ, ಬಾ. ಚರ್ಚರಿಯನ್ನು ಕಲಿಸಿಕೊಡುವೆನು, ಕಲಿತುಕೊ.

ರಾಗ ॥ ತಾಳ ॥

(ಹೂವಿನ ಹಬ್ಬವ । ಇತ್ಯಾದಿ ಹಾಡುವಳು.)

ವಿದೂ—(ಚರ್ಚರಿಯನ್ನು ಬಾರಿಸುತ್ತಾ ರಾಜನ ಬಳಿಗೆ ಹೋಗುವನು.)

ಚೂತಲತೆ—ಸಖಿ! ಮದನಿಕೆ! ಈ ಆಟಪಾಟಗಳಿಂದ ನಾವು ಬಹಳ ಹೊತ್ತನ್ನು ಕಳೆದೆವು. ನಡೆ, ದೇವಿಯ ಆಜ್ಞೆಯನ್ನು ಮಹಾರಾಜನಿಗೆ ಅರಿಕೆಮಾಡೋಣ.

ಮದ—ಹೌದು, ಹೌದು. ಹಾಗಾದರೆ ನಡೆ, (ರಾಜನೆಡೆಗೆ ಬಂದು) ಮಹಾರಾಜನಿಗೆ ಜಯವಾಗಲಿ, ದೇವಿಯು ಆಜ್ಞಾಪಿಸುವಳು. (ಎನ್ನುವಷ್ಟರಲ್ಲೇ ಲಜ್ಜೆಪಟ್ಟು) ಅಲ್ಲ, ಅಲ್ಲ. ವಿಜ್ಞಾಪಿಸುವಳು.

ರಾಜ—(ನಕ್ಕು) ಎಲೆ ಚೇಟಿಯೇ! ದೇವಿಯು ಆಜ್ಞಾಪಿಸುವಳೆಂಬುವುದೇ ಚಂದ, ಹೇಳು ಹೇಳು. ಅದರಮೇಲೆ ಇದು ಮದನ ಮಹೋತ್ಸವವಲ್ಲವೇ? ದೇವಿಯು ಏನಾಜ್ಞಾಪಿಸುವಳು?

ಮದ—"ಮಕರಂದೋದ್ಯಾನದ ಅಶೋಕವೃಕ್ಷದ ಬುಡದಲ್ಲಿ ಕಾಮದೇವನನ್ನು ಪೂಜಿಸುವೆನು, ಅಲ್ಲಿ ಆರ್ಯಪುತ್ರನು ಸನ್ನಿಹಿತನಾಗಬೇಕೆಂದು" ದೇವಿಯು ವಿಜ್ಞಾಪಿಸುವಳು.

ರಾಜ—(ನಕ್ಕು ಸಂತೋಷದಿಂದ) ಮಿತ್ರನೇ! ಉತ್ಸವದಮೇಲೆ ಉತ್ಸವ ಬಂದು ಬಿತ್ತು.

ವಿದೂ—ಏಳು, ಏಳು, ನನಗೂ ಸ್ವಸ್ತಿವಾಚನದ ದಕ್ಷಿಣೆ ಕೈಗೆ ಬಂದು ಬಿತ್ತು.

ರಾಜ—ಎಲೆ ಚೇಟಿ! ಇದೋ ಬಂದೆನೆಂದು ದೇವಿಗೆ ತಿಳಿಸು ಹೋಗು.

ಮದ—(ಅಪ್ಪಣೆ ಎಂದು ಚೂತಲತೆಯೊಡನೆ ಹೋಗುವಳು.)

ರಾಜ—(ಉಪ್ಪರಿಗೆಯಿಂದಿಳಿದು) ಮಿತ್ರನೇ! ಮಕರಂದೋದ್ಯಾನದ ಮಾರ್ಗವನ್ನು ತೋರಿಸು.

ವಿದೂ—ಮಿತ್ರನೇ! ಇತ್ತಿತ್ತ ಬರಬೇಕು.

(ಎಂದು ಹೋಗುವರು)

(ವಾಸವದತ್ತೆಯು ಕಾಂಚನಮಾಲೆಯೊಡನೆ ಮಕರಂದೋದ್ಯಾನ ಮಾರ್ಗವಾಗಿ ಹೋಗುತ್ತಾ)

ವಾಸವದತ್ತೆ—ಎಲೌ ಸಖಿಯರೇ! ಮಕರಂದೋದ್ಯಾನಮಾರ್ಗವನ್ನು ತೋರಿಸುವವರಾಗಿ.

ಕಾಂಚನ—ದೇವಿಯೇ! ಹೀಗೆ ಬರಬೇಕು (ಮುಂದೆ ನೋಡಿ) ಎಲೌ ದೇವಿ! ಇದೋ

ರಾಗ ॥ ಕಾಪಿ ॥

ಸಖಿಯರು—ನಂದನವೆಸೆಗುಂ । ಚಂದದೆ ಮನಕಾ ।
ನಂದಮಂ ಕುಡುತೆ ಸಾಂದ್ರ ಭೂಜಕುಲದಿಂ ॥ ೧ ॥
ನಳನಳಿ । ಪೆಳೆದಳಿ । ರ್ಗಳಿನಿಳಿ । ದಳೆ
ವಳಿ । ಗಳನೊಳ । ಕೊಳುತಿಹ । ನಳಿನಗಳಿಂ ॥ ೨ ॥
ವಾಸವದತ್ತೆ—ತಳಿತ, ಫಳವ, ನೆಳಸಿ । ಬಳಸಿ ।
ಮೆಲುವ । ಗಿಳಿಯ । ಬಳಗದಿಂ ॥ ೩ ॥
ಸಖಿಯರು—ಅಂಬಟೆರಸದಾ । ಳಿಂಬವಕುಳವೌ
ದುಂಬರಂ ಲಿಕುಚಮಾವ್ರುವೃಕ್ಷಕುಲದಿಂ ॥ ೧ ॥
ಸ್ಮರಪದಸರಸಿಜ । ಕೆರಚಿಹ । ಳೆನೆಬನ ।
ಸಿರಿಹರಿ । ಸದೆಸುರಿ । ದಿರುವಲರಿಂ ॥ ೨ ॥
ವಾಸವದತ್ತೆ—ಮಿಸುಪ, ಕುಸುಮ, ರಸವ, ನೆಸೆಯೆ ।
ದೆಸೆದೆ । ಸೆಗೆಸ । ಮಿಾರಣಂ ॥

ನಿಜ, ನೀವು ಹೇಳಿದಂತೆಯೇ ಇರುವುದು. ಆದರೆ ನಾವು ಮನ್ಮಥನನ್ನು ಪೂಜಿಸತಕ್ಕ ಅಶೋಕವೃಕ್ಷವಿನ್ನೂ ಎಷ್ಟು ದೂರವಿರಬಹುದು?

ಸಖಿಯರು—ನೀಲಾಲಕೆ । ಮುಂ । ದಾಲೋಕಿಪುದದುನೀ । ನೆಳಸಿದ
ಪೊಸಮಾಧವಿಯು ॥ ದ್ವಿರದಗಮನೆ । ತರಳ
ನಯನೆ । ಹರಿಣಧರಸಮಾನನೆ ॥ ೩ ॥
ಅಸಮಯ, ದೊಳುದಿಸೆ, ಸುಮುಮವ, ನಿಪಗಾ ।
ಯುಸವೆಸಗಿದ । ನವಮಾಲಿಕೆಯು ॥
ಎಸೆವುದದರ । ಬಳಿಯೊಳರಸಿ । ಯದುವೆ
ಮಿಸುಪಶೋಕವು ॥ ೪ ॥

ವಾಸವ—ನಡೆ, ಅಲ್ಲಿಗೆ ಹೋಗೋಣ.

(ಎಂದೆಲ್ಲರೂ ಹೋಗುವರು)

ರಾಜ—(ವಿದೂಷಕನೊಡನೆ ಪ್ರವೇಶಿಸಿ)

ವಿದೂ.—ಮಿತ್ರನೇ! ಇದೋ ನೋಡು. ಇದೇ ಮಕರಂದೋ

ದ್ಯಾನವು. ಈ ಉದ್ಯಾನವು ಶುಕಪಿಕಧ್ವನಿಗಳಿಂದ ನಿನ್ನ ಸುಖಾಗಮನ ವನ್ನು ಕೇಳುವಂತಿದೆ, ನೋಡು.

ಕಂದ ॥ ವನಜಾಕ್ಷಿಯರೊದೆಯಲ್ಫು
ಲ್ಲೆನಲುಲಿವಂದುಗೆಯ ಮೆಲ್ಲುಲಿಯನಾದಂ ತಾ ।
ನನುಕರಿಸುವಂತಶೋಕದೊ
ಳೆನಸುಂ ಭೃಂಗಾಳಿ ಪಾಡುತಿರ್ದಪುದೊಲವಿಂ ॥

ವಿದೂ—ಮಿತ್ರ ! ಭೃಂಗಧ್ವನಿಯೇನೋ ಅಂದುಗೆಯ ಶಬ್ದ ವನ್ನನುಕರಿಸುವುದಿಲ್ಲ. ನಿಜವಾಗಿ ದೇವಿಯ ಪರಿಜನದ ಕಾಲಂದುಗೆಯ ಶಬ್ದವಾಗಿರಬಹುದೆಂದು ತೋರುವುದು.

ರಾಜ—ಹೌದು, ಚೆನ್ನಾಗಿ ಹೇಳಿದೆ, ನಡೆ, ಸಮೀಪಕ್ಕೆ ಹೋಗೋಣ

(ಎಂದು ಹೋಗುವರು.)

---

## ಮಕರಂದೋದ್ಯಾನ

(ಸಾಗರಿಕೆಯು ಪೂಜೋಪಕರಣಗಳೊಡನೆ ಪ್ರವೇಶಿಸುವಳು).

ವಾಸವದತ್ತೆ—(ಕಾಂಚನಮಾಲೆಯೊಡನೆ ಪ್ರವೇಶಿಸಿ) ಎಲೆ ಸಖಿ ! ಎಲ್ಲಿ, ಪೂಜೋಪಕರಣಗಳನ್ನು ತೆಗೆದುಕೊಂಡು ಬಾ.

ಸಾಗರಿಕೆ—(ಸಮೀಪಕ್ಕೆ ಬಂದು) ಇದೊ, ಸಕಲವೂ ಸಿದ್ಧವಾ ಗಿರುವುದು.

ವಾಸವ— (ನೋಡಿ ಸ್ವಗತಂ) ಓಹೋ ! ಮೋಸವಾಯಿ ತಲ್ಲಾ ! ಯಾವಳನ್ನು ಯಾರ ಕಣ್ಣಿಗೆ ಕಾಣದಂತೆ ಇಟ್ಟಿದ್ದೆನೋ, ಅವಳು ಆತನ ಕಣ್ಣಿಗೆ ಬೀಳುವಂತಾಯಿತಲ್ಲಾ ! ಏನುಮಾಡಲಿ ? ಒಳ್ಳೆಯದು, ಹೀಗೆ ಮಾಡುವೆನು. (ಪ್ರಕಾಶ) ಎಲೆ ಸಾಗರಿಕೆ ! ನನ್ನ ಪರಿಜನಗಳು ಮದನಮಹೋತ್ಸವಸಂಭ್ರಮದಲ್ಲಿರುವಾಗ, ಮೇಧಾವಿನಿ ಯೆಂಬ ಶಾರಿಕೆಯನ್ನು ಬಿಟ್ಟು ಇಲ್ಲಿಗೇತಕ್ಕೆ ಬಂದೆ ? ಪೂಜೋಪಕರಣ ಗಳನ್ನು ಈ ಕಾಂಚನಮಾಲೆಯ ಕೈಗೆ ಕೊಟ್ಟು ಹೋಗು.

ಸಾಗರಿಕೆ—ದೇವಿಯ ಅಪ್ಪಣೆ. (ಮುಂದೆ ಹೋಗಿ ಮರೆಯಲ್ಲಿ) ಸಾರಿಕೆಯನ್ನಂತೂ ಸುಸಂಗತೆಯ ಕೈಯಲ್ಲಿ ಕೊಟ್ಟು ಬಂದಿರುವೆನು. ನನಗೂ ಈ ಉತ್ಸವವನ್ನು ನೋಡಬೇಕೆಂಬ ಕುತೂಹಲವು ಬಹಳವಾಗಿ ರುವುದು. ಏಕೆಂದರೆ ನಮ್ಮ ತಂದೆಯ ಅಂತಃಪುರದಲ್ಲಿ ಮನ್ಮಥ ಪೂಜೆಯು ಹೇಗೆ ನಡೆಯುವುದೊ, ಇಲ್ಲೂ ಹಾಗೆಯೇ ನಡೆಯುವುದೋ, ಅಥವಾ ಬೇರೆ ವಿಧವಾಗಿ ನಡೆಯುವುದೋ? ತಿಳಿಯದು. ಆದುದರಿಂದ ಇಲ್ಲಿ ಮರೆಯಾಗಿದ್ದುಕೊಂಡು ನೋಡುವೆನು. ಆದರೆ ದೇವಿಯು ಪೂಜಿ ಸುವಷ್ಟರಲ್ಲಿಯೇ, ನಾನೂ ಮನ್ಮಥನನ್ನು ಅರ್ಚಿಸಲು ಪುಷ್ಪಗಳನ್ನೆತ್ತಿ ಕೊಂಡು ಬರುವೆನು. (ಎಂದು ಹೂವನ್ನು ಕೊಯ್ವಳು)

ವಾಸವದತ್ತೆ—ಸಖಿ! ಕಾಂಚನಮಾಲೆ, ಈ ಅಶೋಕವೃಕ್ಷದ ಬುಡ ದಲ್ಲಿ ಕಾಮದೇವನನ್ನು ಪ್ರತಿಷ್ಠಿಸುವಳಾಗು.

ಕಾಂಚನಮಾಲೆ—ಅಪ್ಪಣೆ (ಪ್ರತಿಷ್ಠಿಸುವಳು.)

ವಿದೂ—(ರಾಜನೊಡನೆ ಪ್ರವೇಶಿಸಿ) ಮಿತ್ರನೇ! ಅಂದುಗೆಯ ಶಬ್ದವು ನಿಂತುಹೋದಹಾಗಿದೆ. ಆದುದರಿಂದ ದೇವಿಯು ಅಶೋಕವೃಕ್ಷದ ಮೂಲವನ್ನು ಸೇರಿದಳೆಂದೆಣಿಸುವೆನು.

ರಾಜ—(ಮುಂದೆ ನೋಡಿ) ಇದೊ, ದೇವಿಯು—

ಕಂದ ॥ ಎಡೆಗೊಂಡುಪವಾಸದೆ ಕಡು
ಬಡವೆನಿಸಿದ ನಡುವನಾಂತ ಕುಸುಮಾಂಗಿ ಇವಳ್ ॥
ಬೆಡಗು ಮಿಗೆ ರಂಜಿಪಳ್ ಸ್ಮರ
ನೆಡೆಯೊಳ್ ನಿಲಿಸಿರ್ಪ ಚಾಪಲತೆಯಂತೀಗಳ್ ॥

ವಿದೂ—ನಡೆ, ಸಮೀಪಕ್ಕೆ ಹೋಗೋಣ.

ರಾಜ—ಸ್ವಲ್ಪ ತಾಳು, ದೇವಿಗೆ ಧ್ಯಾನಭಂಗವಾಗಬಾರದು.

ಕಾಂಚನ—ದೇವಿಯೇ, ಸ್ವಹಸ್ತದಿಂದ ಕೊಯ್ದುತಂದ ಪರಿಮಳ ಪುಷ್ಪಗಳಿಂದಲೂ, ಕೇಸರಿಯಿಂದ ಮಿಶ್ರವಾದ ಗಂಧಾನುಲೇಪನದಿಂದಲೂ ಪ್ರದ್ಯುಮ್ನನನ್ನು ಪೂಜಿಸುವಳಾಗು.

ವಾಸ—(ಪೂಜಿಸುತ್ತಿರುವಳು)

ವಿದೂ.—ಮಿತ್ರನೇ! ನೋಡು. ದೇವಿಯು ಅನಂಗನನ್ನು ಪೂಜಿಸುತ್ತಾ ಹೇಗೆ ಪರಿಶೋಭಿಸುತ್ತಿರುವಳು.

ರಾಜ—ಚೆನ್ನಾಗಿ ತಿಳಿದೆ.

ಕಂದ ॥ ಕೌಸುಂಭವಸ್ತ್ರಮಂ ತಳೆ
ದೀಸತಿ ನವಮಜ್ಜನಾಮಲಾಂಗದೊಳೊಲವಿಂ ।
ಪೊಸರನನರ್ಚಿಸುತ್ತುಂ
ಭಾಸಿಸುವಳ್ ಪವಳಬೊಂಬೆಯೆಂಬವೊಲೀಗಳ್ ॥

ವಿದೂಷಕ—ಮಿತ್ರನೇ ! ಪೂಜೆ ಮುಗಿದಹಾಗಿದೆ. ಸಮೀಪಕ್ಕೆ ಹೋಗೋಣ ನಡೆ. (ವಿದೂಷಕನೊಡನೆ ಸಮೀಪಕ್ಕೆ ಹೋಗುವನು).

ವಾಸ—(ರಾಜನನ್ನು ನೋಡಿ) ಆರ್ಯಪುತ್ರನೇ ! ವಿಜಯಿಸು. ಇದೊ, ಈ ಪೀಠವನ್ನಲಂಕರಿಸು.

ರಾಜ—(ಕುಳಿತುಕೊಂಡು)

॥ ರಾಗ ॥

ತಾಮರಸಾಕ್ಷಿ ಕೇಳೆ । ಪ್ರೇಮವತಾಳೆ ।
ಸೋಮಾರ್ಧಫಾಲೇ ॥ ಪ ॥
ಇದೆ ನಿನ್ನ ಕರವ ಸೋಂ । ಕಿದ ರಕ್ತಾಶೋಕದೊ
ಳೊದಗಿತು ತಳಿರುಬೇರೆ । ಜಗದೆ ॥

ಕಂದ ॥ ನಳಿನೇಕ್ಷಣೆ ನಿನ್ನಯಕೋ
ಮಳ ಪಾಣಿಸ್ಪರ್ಶ ಜನಿತಪರಮೋತ್ಸವಮಂ ।
ತಳೆಯುದಳಲಿಂದೆ ಮನಸಿಜ
ನೊಳಕೊಂಡತನುತೆಯುನಿಂದು ಪಳಿಯುದೆ ಮಾಣಂ ॥

ಕಾಂಚನ—ಎಲೌ ದೇವಿಯೇ ! ರತಿಪತಿಯನ್ನು ಪೂಜಿಸಿದಂತೆ ನಿನ್ನ ಪತಿಯನ್ನೂ ಪೂಜಿಸುವಳಾಗು.

ವಾಸ—ಎಲ್ಲಿ ಕುಸುಮಾಕ್ಷತೆಗಳನ್ನು ಕೊಡುವವಳಾಗು, (ಕಾಂಚನ ಮಾಲೆ ಕೊಡುವಳು, ದೇವಿ ಪೂಜಿಸುವಳು).

ಸಾಗ—(ಹೂವನ್ನು ಎತ್ತಿಕೊಂಡು) ಅಯ್ಯೋ ! ಹೂವೆತ್ತುವ ಸಡಗರದಲ್ಲಿ ವೃಥಾ ಕಾಲವನ್ನು ಕಳೆಯುವಳಾದೆ, ಈಗಲಾದರೂ ವೃಕ್ಷದ ಮರೆಯಲ್ಲಿ ನಿಂತು ಮನ್ಮಥನ ಪೂಜೆಯನ್ನು ನೋಡುವೆನು (ನೋಡಿ) ಆಃ ! ಆಶ್ಚರ್ಯ ಆಶ್ಚರ್ಯ ! ಇದೇನಿಲ್ಲಿ, ಮನ್ಮಥನು ಪ್ರತ್ಯಕ್ಷವಾಗಿ ಪೂಜೆ

ಗೊಳ್ಳುವನು. ನಮ್ಮ ಅಂತಃಪುರದಲ್ಲಾದರೋ ಚಿತ್ರದಲ್ಲಿಯಾಗಲಿ, ಪ್ರತಿಮೆಯ ರೂಪದಲ್ಲಿಯಾಗಲಿ ಪೂಜೆಗೊಳ್ಳುವನು. ಈತನನ್ನು ನಾನೂ ಇಲ್ಲಿಂದಲೇ ಈ ಕುಸುಮಗಳಿಂದ ಅರ್ಚಿಸುವೆನು. ಎಲೈ ಕಾಮದೇವನೇ ! ನಿನ್ನನ್ನು ವಂದಿಸುವೆನು. ನಿನ್ನ ದರ್ಶನವು ನನಗೆ ಸಾರ್ಥಕವಾಗಲಿ ; (ಎಂದು ಪುಷ್ಪಗಳನ್ನೆರಚಿ) ಈಗ ನಾನು ನೋಡತಕ್ಕುದನ್ನು ನೋಡಿದೆನು. ನೋಡಿದುದನ್ನೇ ಪುನಃ ನೋಡಬೇಕೆನಿಸುವುದು. ಆದರೆ ಯಾರಾದರೂ ನನ್ನನ್ನು ಕಂಡಾರೋ ಏನೋ ! ತ್ವರೆಯಾಗಿ ಹೋಗುವೆನು.

(ಅನುರಾಗದಿಂದ ಮಹಾರಾಜನನ್ನು ನೋಡುವಳು)

ಕಾಂಚ— ಆರ್ಯ ವಸಂತಕನೇ ! ಹೀಗೆ ಬಾ. ಬಾಗಿನವನ್ನು ತೆಗೆದುಕೊ.

ವಾಸ—ಆರ್ಯವಸಂತಕನೇ ! ಸದಕ್ಷಿಣವಾದ ಈ ಬಾಗಿನವನ್ನು ಸ್ವೀಕರಿಸುವನಾಗು.

ವಿದೂ—(ತೆಗೆದುಕೊಂಡು) ದೇವಿಯೇ ! ನಿನಗೆ ಸ್ವಸ್ತಿಯಾಗಲಿ ;

ವೈತಾಳಿಕರು—

॥ ರಾಗ ॥ ಶಂಕರಾಭರಣ ॥ ನೋಟು ॥

ದಿನಪನಸ್ತಗಿರಿಯಸಾರು । ತಿರುವನುಳಿ
ದು । ಗಗನವಂ ॥ ಪ ॥
ಪೊರೆವವೋಲ್ಕುವಲಯುವಂ । ಪೊರೆ
ವೆಯುನುತೆಸಮಯುವಂ ! ಕಾಯ್ವು
ರೈನರೇಶರು । ಉದಯನಕ್ಷಿತೀಶ್ವರಾ ॥

ಸಾಗ—(ಕೇಳಿ ಸಂತೋಷದಿಂದ ರಾಜನನ್ನು ನೋಡಿ) ಆಃ ! ನಮ್ಮ ತಂದೆಯು ಆವನಿಗಾಗಿ ನನ್ನನ್ನು ಕೊಟ್ಟನೋ ಆ ಉದಯನಕ್ಷಿತೀಶ್ವರನೇ ಈತನು ! ಆದರೆ ಇದುಪರೆಗೆ ನನ್ನ ಶರೀರವು ಪರಸೇವೆಯಿಂದ ದೂಷಿತವಾದುದಾದರೂ ಈ ಮಹಾರಾಜನ ದರ್ಶನದಿಂದ ಈಗ ಕೃತಾರ್ಥವಾಯಿತು.

ರಾಜ—ಆಃ ಈ ಉತ್ಸವದ ಸಡಗರದಲ್ಲಿ ಸಂಜೆಯಾದುದೂ ಕೂಡ ಕಾಣಿಸಲೇ ಇಲ್ಲವಲ್ಲಾ.

ಕಂದ ॥ ಸುರಪದಿಶೆಯುದಯಧರಣೀ
ಧರದೊಳಡಗಿರ್ಪ ಚಂದ್ರನಂ ಸೂಚಿಸುಗುಂ ।
ಪರಿಪಾಂಡುರಮುಖದಿಂ ಸುಂ
ದರಿ ಹೃದಯದೆ ಪುದಿದ ಕಾಂಕ್ಷನಂ ಸೂಚಿಪವೋಲ್ ॥

ವಾಸವ—ಆರ್ಯಪುತ್ರನೇ ! ಸಂಜೆಯಾಯಿತು.

(ಎಲ್ಲರೂ ಏಳುವರು)

ಸಾಗ—(ಭಯದಿಂದ) ಹಾ ! ಇನ್ನೇನು ಗತಿ ! ದೇವಿ ಹೊರಟಳು. ಇವಳಿಗೆ ಮುಂಚಿತವಾಗಿ ನಾನು ಹೊರಡುವೆನು. (ಸ್ವಲ್ಪ ಮುಂದೆ ಹೋಗಿ ರಾಜನನ್ನು ನೋಡಿ ನಿಟ್ಟಿಸುರು ಬಿಟ್ಟು) ಹಾ ! ಮಂದಭಾಗ್ಯಳಾದ ನನಗೆ ಸಾವಕಾಶವಾಗಿ ಈ ಮಹಾರಾಜನನ್ನು ನೋಡುವುದಕ್ಕೂ ಲಭ್ಯವಿಲ್ಲವಲ್ಲಾ ! ಏನುಮಾಡಲಿ ? (ರಾಜನನ್ನು ತಿರುತಿರುಗಿ ನೋಡುತ್ತಾ ಹೋಗುವಳು)

॥ ರಾಗ ॥ ಶಂಕರಾಭರಣ ॥ ಆದಿ ॥

ರಾಜ—ಮುಗುದೆಯೆನಿನ್ನ । ಮೊಗಕಿದೋನಾಚುತ ।
ಮುಗಿದುವುತಾವರೆ ಬಗೆಗುಂದುತೀಗ॥ ೧ ॥
ನೀರೆಯೆ ನಿಜಪರಿ ವಾರಗೀತಕೆಸೋತು ।
ಸಾರಸಕೋಶವ । ದೂರುವವಳಿಗಳು॥ ೨ ॥
ಸುದತಿಯೆನಿನ್ನಾ । ವದನಕೆನಾಚಿಕೊಂ ।
ಡುದಯಾದ್ರಿಗವಿಯೊಳು । ಹುದುಗಿಹನಿದೊಶಶಿ ॥ ೩ ॥

(ಎಲ್ಲರೂ ತೆರಳುವರು)

ಇಂತಿದು ಮೊದಲನೆಯಂಕಂ.



# ಎರಡನೆಯಂಕಂ

(ಸಾರಿಕೆಯ ಪಂಜರವನ್ನು ಹಿಡಿದುಕೊಂಡು ಸುಸಂಗತೆಯ ಪ್ರವೇಶ)

ಸುಸಂಗತೆ—ಪ್ರಿಯಸಖಿಯಾದ ಸಾಗರಿಕೆಯು ಈ ಸಾರಿಕೆಯ ಪಂಜರವನ್ನು ನನ್ನ ಕೈಗೆ ಕೊಟ್ಟು ಎಲ್ಲಿಹೋಗಿರುವಳೋ ಕಾಣೆ. (ಮುಂದೆ ನೋಡಿ) ಇದೊ, ನಿಪುಣಿಕೆಯು ಈ ಕಡೆಗೆ ಬರುತ್ತಿರುವಳು. ಆದುದರಿಂದ ಆಕೆಯನ್ನು ಕೇಳುವೆನು.

ನಿಪುಣಿಕೆ – (ಪ್ರವೇಶಿಸಿ) ಮಹಾರಾಜನ ವೃತ್ತಾಂತವನ್ನು ತಿಳಿದು ದಾಯಿತು. ಇದನ್ನು ದೇವಿಗೆ ತಿಳಿಸುವೆನು. (ಮುಂದೆ ಹೋಗುತ್ತಿರುವಳು)

ಸುಸಂ—ನಿಪುಣಿಕೆ! ಇದೇನು? ಏನೋ ಆಶ್ಚರ್ಯಭರಿತಹೃದಯಳಾದ ಹಾಗೆ ನನ್ನನ್ನು ಮಾತನಾಡಿಸದೆ ಅತಿಕ್ರಮಿಸಿ ಹೋಗುವೆ?

ನಿಪು—(ನೋಡಿ) ಯಾರು? ಸುಸಂಗತೆಯೇ? ಸಖಿ, ಸುಸಂಗತೆ! ನನ್ನ ಆಶ್ಚರ್ಯಕ್ಕೆ ಕಾರಣವನ್ನು ಚೆನ್ನಾಗಿ ತಿಳಿದೆ, ಹೇಳುವೆನು. ಕೇಳು; ಈಗ ಮಹಾರಾಜನು ಶ್ರೀಶೈಲದಿಂದ ಬಂದ ಶ್ರೀಖಂಡದಾಸನೆಂಬ ಧಾರ್ಮಿಕನ ದೆಸೆಯಿಂದ ಅಕಾಲಕುಸುಮಜನಕದೋಹಳ ವಿದ್ಯೆಯನ್ನು ಕಲಿತು ತಾನು ಪರಿಗ್ರಹಿಸಿರುವ ನವಮಾಲಿಕಾಲತೆಗೆ ಕುಸುಮಸಮೃದ್ಧಿಯನ್ನು ಮಾಡುವನೆಂಬ ವೃತ್ತಾಂತವನ್ನು ತಿಳಿಯುವುದಕ್ಕಾಗಿ, ದೇವಿಯು ನನ್ನನ್ನು ಕಳುಹಿಸಿದ್ದಳು. ನೀನೆಲ್ಲಿಗೆ ಹೋಗುವೆ?

ಸುಸಂ—ಪ್ರಿಯಸಖಿಯಾದ ಸಾಗರಿಕೆಯನ್ನು ಹುಡುಕುವುದಕ್ಕಾಗಿ.

ನಿಪು—ಸಾಗರಿಕೆಯನ್ನು ಕಂಡೆನು. ಆಕೆ ಚಿತ್ರಸಾಮಗ್ರಿಯನ್ನು ಹಿಡಿದುಕೊಂಡು ಕದಳೀಮಂಟಪಕ್ಕೆ ಹೋದಳು. ಅಲ್ಲಿಗೆ ನೀನು ಹೋಗು, ನಾನು ದೇವಿಯ ಸಮೀಪಕ್ಕೆ ಹೋಗುವೆನು. (ಎಂದಿಬ್ಬರೂ ಹೋಗುವರು).

(ಚಿತ್ರಸಾಮಗ್ರಿಯನ್ನಿಟ್ಟುಕೊಂಡು ಮದನಾವಸ್ಥೆಯನ್ನನುಭವಿಸುತ್ತ ಸಾಗರಿಕೆಯು ಪ್ರವೇಶಿಸುವಳು)

ಸಾಗರಿಕೆ—(ನಿಟ್ಟುಸಿರುಬಿಟ್ಟು) ಎಲೈ ಹೃದಯವೇ! ಸ್ಥೈರಿಸು ಸ್ಥೈರಿಸು. ದುರ್ಲಭವಾದ ಜನವನ್ನು ಬಯಸಿ ವೃಥಾ ಏತಕ್ಕೆ ಸಂಕಟ ಪಡುವೆ? ಇದರಿಂದ ಆಯಾಸಪಡುವುದೊಂದಲ್ಲದೆ ಇನ್ನೇನೂ ಫಲವಿಲ್ಲ. ಇದಲ್ಲದೆ ಯಾವನನ್ನು ನೋಡಿದಮಾತ್ರಕ್ಕೆ ಇಷ್ಟು ಸಂತಾಪವುಂಟಾ ಯಿತೋ ಮತ್ತೆ ಆತನನ್ನೇ ನೋಡಲು ಕುತೂಹಲಪಡುವೆಯಲ್ಲಾ? ನಿನ್ನ ಮೂಢತೆಯನ್ನು ಎಷ್ಟೆಂದು ಹೇಳಲಿ? ಎಲೈ ಕೃತಘ್ನ ಹೃದಯವೆ! ಎಲ್ಲೋ ಒಂದಾವೃತ್ತಿ ನೋಡಿದಮಾತ್ರದಿಂದ ಅಪರಿಚಿತವಾದ ಜನವನ್ನು ಕುರಿತು, ಜನ್ಮಾರಭ್ಯವಾಗಿ ಒಡನೆ ಬೆಳೆದು ಒಡಗೂಡಿರುವ ನನ್ನನ್ನು ಬಿಟ್ಟು ಹೋಗುವೆಯಲ್ಲ! ನಿನಗೆ ನಾಚಿಕೆಯಿಲ್ಲವೆ? ತೆಗೆ ತೆಗೆ! ಒಂದುವೇಳೆ ನಿನ್ನಮೇಲೇನೂ ದೋಷವಿಲ್ಲ. ಏಕೆಂದರೆ, ಮನ್ಮಥಬಾಣತಾಪಕ್ಕೆ ಹೆದರಿಕೊಂಡು ನೀನು ಹೀಗಾಡಬಹುದು. ಒಳ್ಳೆಯದು, ಆಗಲಿ. ಆ ಮನ್ಮಥ ನನ್ನೇ ನಿಂದಿಸುವೆನು.

॥ ರಾಗ ॥ ಆನಂದಭೈರವಿ॥ಛಾಪುತಾಳ॥

ಅಂಗವಿಡಲ್ಲವು ಅಂಗಜನೇ ॥ ಪ ॥
ಅಂಗನೆಯ ಭಂಗಗೈದು । ಕಂಗೆಡಿಪುದಂಗ ॥ಅ॥
ಏತಕಿಂತು । ಖಾತಿಯಾಂತು । ಶಾತಬಾಣಜಾತದಿ ।
ಪಾತಕಿಯೆ । ಘಾತಿಸುವೆ ನೀತಿಯೆಪೇಳ್ ॥ ೧ ॥
ಪೂಸರ ದೇವಾಸುರರ । ಜಯಿಸುತೀಗನಾಥೆಯು ।
ವಾಸಿಯಾಂತು ಘಾಸಿ । ಗೈದು ಹೇಸದಿರ್ಪೆ ॥ ೨ ॥

ಸರ್ವಪ್ರಕಾರದಿಂದಲೂ ಈ ಸಂಕಟವು ನನ್ನನ್ನು ತೀರಿಸುವುದಕ್ಕೆ ಬಂದಿರುವುದು. ಆದರೆ ಯಾರಾದರೂ ಬಂದು ನನ್ನನ್ನು ಕಾಣುವುದ ರೊಳಗಾಗಿ ನನಗಿಷ್ಟವಾದ ಜನವನ್ನು ಈ ಪಟದಲ್ಲಿ ಬರೆದು ನೋಡಿ, ನನ್ನ ಅಪೇಕ್ಷೆಯನ್ನು ತೀರಿಸಿಕೊಳ್ಳುವೆನು. (ಬರೆದು) ಹಾ! ತೆಗೆ ತೆಗೆ, ಬರೆಯುವುದಕ್ಕೆ ನನ್ನ ಕೈ ನಡುಗುತ್ತಿರುವುದು. ಇದನ್ನು ಬಿಟ್ಟರೆ, ನನ್ನ

ಇಷ್ಟಜನವನ್ನು ನೋಡುವುದಕ್ಕೆ ಬೇರೆ ಉಪಾಯವಿಲ್ಲ. ಹೇಗಾದರೂ ಆಗಲಿ, ಬರೆಯುವೆನು. (ಬರೆಯುವಳು)

ಸುಸಂ—( ಪ್ರವೇಶಿಸಿ ) ಇದೇತಾನೆ ಕದಳೀ ಮಂಟಪವು, ಇಲ್ಲಿಗೆ ಪ್ರವೇಶಿಸುವೆನು (ಮುಂದೆಬಂದು ಸಾಗರಿಕೆಯನ್ನು ನೋಡಿ) ಇದೇನಿವಳು ಏನೋ ಭಾವವನ್ನು ಮನಸ್ಸಿನಲ್ಲಿ ಯೋಚಿಸಿಕೊಂಡು ಸಮೀಪದಲ್ಲಿರುವ ನನ್ನನ್ನೂ ಕೂಡಾ ನೋಡದೆ ಏನೋ ಬರೆಯುತ್ತಿರುವಳು ? ಇವಳಿಗೆ ಕಾಣಿಸದಂತೆ ನಿಂತು ನೋಡುವೆನು (ಹಿಂದೆ ನಿಂತು ನೋಡುತ್ತಿರುವಳು)

ಸಾಗ—ನನ್ನ ಪ್ರಿಯನನ್ನು ಬರೆದೆನು ; ನೋಡುವೆನೆಂದರೆ ತುಂಬಿ ಬರುವ ಕಂಬನಿಯು ನನ್ನ ದೃಷ್ಟಿಗೆ ಅವಕಾಶಕೊಡದೆ ಇರುವುದು ? ಏನುಮಾಡಲಿ ? ಹಾ ! ವಿಧಿಯೆ ! ಪರಾಧೀನೆಯಾದ ನನಗೆ ಪ್ರಿಯನನ್ನು ನೋಡುವುದಕ್ಕೆ ಆಗಲೂ ಅವಕಾಶಕೊಡದೇಹೋದೆ, ಚಿತ್ರಗತನನ್ನಾದರೂ ನೋಡೋಣವೆಂದರೆ ಈಗಲೂ ಅವಕಾಶಕೊಡದೆ ಇರುವೆಯಲ್ಲ, ನಿನ್ನ ನಿಷ್ಕರುಣತೆಯನ್ನೆಷ್ಟೆಂದು ಹೇಳಲಿ ?

ಸುಸಂ— (ಚಿತ್ರಪಟವನ್ನು ನೋಡಿ ತನ್ನಲ್ಲಿ ತಾನು) ಇದೇನು ! ಈಕೆ ಮಹಾರಾಜನನ್ನು ಬರೆದಿರುವಳು ? ಭಾಪು! ಸಾಗರಿಕೆ ! ಭಾಪು ! ಕಲಹಂಸಿಯು, ಕಮಲಾಕರವನ್ನು ಬಿಟ್ಟು ಇನ್ನೆಲ್ಲಿತಾನೇ ಸಂತೋಷಿಸೀತು. ?

ಸಾಗ—(ಕಣ್ಣೀರನ್ನು ಒರಸಿಕೊಂಡು ಚಿತ್ರಪಟವನ್ನು ಚೆನ್ನಾಗಿ ನೋಡಿ)

॥ ರಾಗ ॥ ಅಠಾಣ ॥ ರೂಪಕತಾಳ ॥

ಸರಿಯೇನೊ ಸುಂದರಾಂಗ ।
ಮರೆಹೊಕ್ಕ ಕಾಮಿನೀಯನು ।
ಮರೆದಿಂತು । ಸ್ಮರನಕೈಗೀವುದು ॥ ೧ ॥
ನೃಪಚಂದ್ರ ನಿನ್ನರೂಪ । ರಿಪುವಾದ
ಕಾಮನೀಪರಿ । ವಪುವನ್ನು ಬಾಧೆಗೈದರು
ಕೃಪೆಗೈಯ್ಯದಿಂತುನೀನಿರ್ಪುದು ॥ ೨ ॥

ಸುಸಂ— ಓಹೋ ! ಬರೆದ ಚಿತ್ರವನ್ನು ಪ್ರತ್ಯಕ್ಷವಾಗೆಣಿಸಿ,

ಉನ್ಮತ್ತಳಂತೆ ಮಾತನಾಡಲು ಪ್ರವರ್ತಿಸಿರುವಳು. ಈಗ ಇವಳಿಗೆ ನಾನು ಕಾಣಿಸಿಕೊಂಡು, ವ್ಯಕ್ತಪಡಿಸುವೆನು. (ಪ್ರಕಾಶ) ಸಖೀ! ನೀನು ಯಾರನ್ನು ಬರೆದಿರುವೆ? (ಸಾಗರಿಕೆ ಸುಮ್ಮನಿರುವಳು)

ಸುಸಂ— ಇದೇನು? ನಾನು ಹೇಳಿದುದು ಈಕೆಗೆ ಕೇಳಿಸಲೇ ಇಲ್ಲ. (ಸಾಗರಿಕೆಯನ್ನು ಮುಟ್ಟಿ) ಎಲೆ ಪ್ರಿಯಸಖಿ? ನೀನು ಬರೆದಿರುವುದು ಯಾರನ್ನೆಂದು ಕೇಳುವೆನು, ಹೇಳು.

ಸಾಗ—(ಮುಖವನ್ನೆತ್ತಿ ಕಂಬನಿಯನ್ನು ತೊಡೆದು ಚಿತ್ರಪಟವನ್ನು ಮುಚ್ಚಿಕೊಂಡು) ಓಹೋ! ಪ್ರಿಯಸಖಿ! ಸುಸಂಗತೆಯೆ? ನಿನಗೆ ಸುಖಾಗಮನವೇ? ಬಾ, ಇಲ್ಲಿ ಕುಳಿತುಕೊ.

ಸುಸಂ—(ಸ್ವಗತಂ) ಈಕೆ ನನ್ನನ್ನು ನೋಡಿ ನಾಚಿಕೆಪಟ್ಟಿರುವಳು. ಆದುದರಿಂದ ಹೀಗೆ ಹೇಳುವೆನು. (ಪ್ರಕಾಶಂ) ಸಖಿ! ನಿನ್ನಿಂದ ಬರೆಯಲ್ಪಟ್ಟ ಈತನಾರು?

ಸಾಗ—ಉತ್ಸವಬೆಳೆದ ಮನ್ಮಥನಲ್ಲವೆ?

ಸುಸಂ—ಸಖಿ, ನಿಜವಾಗಿ ನೀನು ಬಹುಜಾಣೆ. ಹೇಗೆಂದರೆ, ಕಾಯವಿಲ್ಲದ ಕಾಮದೇವನನ್ನು ಬರೆದೆಯಲ್ಲ. ಆದರೆ ನೀನು ಬರೆದ ಈ ಚಿತ್ರದಲ್ಲಿ ಏನೋ ಕಡಿಮೆಯಾದಂತೆ ತೋರುವುದು. ಇಲ್ಲಿ ತಾ, ರತಿಯನ್ನು ಬರೆದು ಪೂರ್ತಿಮಾಡುವೆನು. (ತೆಗೆದುಕೊಂಡು ಸಾಗರಿಕೆಯನ್ನು ಬರೆಯುವಳು)

ಸಾಗ—(ಚೆನ್ನಾಗಿ ನೋಡಿ ಕೋಪಿಸಿಕೊಂಡು) ಇಲ್ಲಿ ನನ್ನನ್ನೇತಕ್ಕೆ ಬರೆದೆ?

ಸುಸಂ—(ನಕ್ಕು) ಅಕಾರಣವಾಗಿ ನನ್ನಮೇಲೆ ಏಕೆ ಕೋಪ ಮಾಡುವೆ? ನೀನು ಎಂತಹ ಕಾಮದೇವನನ್ನು ಬರೆದೆಯೋ, ನಾನು ಅಂತಹ ರತಿದೇವಿಯನ್ನು ಬರೆದೆನು. ಎಲೆ ಲಜ್ಜೆಗಾತಿ! ನನ್ನನ್ನು ಏಕೆ ಬೇರೆ ಎಣಿಸುವೆ? ಸಾಕು, ತೆಗೆ. ನಿನ್ನ ವೃತ್ತಾಂತವೇನು ಹೇಳು?

ಸಾಗ—(ಸ್ವಗತಂ) ಪ್ರಿಯಸಖಿಗೆ ತಿಳಿದಹಾಗೆ ತೋರುವುದು, ಆದರೂ ಹೀಗೆ ಹೇಳುವೆನು, (ಸುಸಂಗತೆಯ ಕೈಹಿಡಿದು) ಪ್ರಿಯಸಖಿ, ನನಗೆ ಲಜ್ಜೆಯಾದರೋ ಬಹಳವಾಗಿರುವುದು. ರಾಣಿಯಾಣೆ, ಯಾರಿಗೂ ಹೇಳಬೇಡ ಕಂಡೆಯಾ?

ಸುಸಂ—ಸಖಿ! ಲಜ್ಜೆಪಡಬೇಡ, ಇಂತಹ ಕನ್ಯಾರತ್ನಕ್ಕೆ ಅಂತಹ ನೃಪವರನಲ್ಲಿ ಅಭಿಲಾಷೆಯುಂಟಾಗುವುದು ಯುಕ್ತವೇ; ಆದರೂ ಯಾರಿಗೂ ತಿಳಿಯದಂತೆ ಮಾಡುವೆನು. ಈ ಮೇಧಾವಿನಿತಾನೆ ಕೇಳಿದ ಮಾತುಗಳನ್ನು ಯಾರಮುಂದಾದರೂ ಹೇಳೀತೋ ಏನೊ? ಎಂದು ಸ್ವಲ್ಪ ಶಂಕೆಪಡುವೆನು.

ಸಾಗ—ಸಖಿ! ಅದನ್ನೂ ನೀನೇ ನೋಡಿಕೊಳ್ಳಬೇಕು.

ಸುಸಂ—ಸಖಿ! ಭಯಪಡಬೇಡ, ಅದನ್ನೂ ನಾನೇ ನೋಡಿಕೊಳ್ಳುವೆನು.

ಸಾಗ—ಸುಸಂಗತೆ! ಸಂತಾಪವು ನನ್ನನ್ನು ಅಧಿಕವಾಗಿ ಬಾಧಿಸುವುದು.

ಸುಸಂ—(ಸಾಗರಿಕೆಯ ಹೃದಯದಲ್ಲಿ ಕೈಯಿಟ್ಟು) ಸಖಿ! ಸಂತೈಸಿಕೊ, ಈ ತಿಳಿಗೊಳದಿಂದ ತಾವರೆಯೆಲೆಗಳನ್ನೂ, ಮೃಣಾಳಗಳನ್ನೂ ತೆಗೆದುಕೊಂಡು ಬರುವೆನು. (ತೆಗೆದುಕೊಂಡು ಬಂದು ತಾವರೆಎಲೆಗಳ ಹಾಸಿಗೆಯನ್ನುಮಾಡಿ ಮಲಗಿಸಿ, ಮೃಣಾಳಗಳನ್ನು ಮೈಮೇಲೆ ಇಡುವಳು)

ಸಾಗ—ಸಖಿ! ತೆಗೆ, ತೆಗೆ, ಈ ತಾವರೆಯೆಲೆಗಳನ್ನೂ ಮೃಣಾಳಗಳನ್ನೂ ಹಾಕಿ ಅಕಾರಣವಾಗಿ ನನ್ನ ಶರೀರವನ್ನು ಏಕೆ ಬಳಲಿಸುವೆ?

ಕಂದ ॥ ಎಳಸಿದಜನವೊಂದುವೊಡಸ
ದಳಮಕಟಾ! ಲಜ್ಜೆಪಿರಿದು ಮೇಣ್‌ಪರವಶೆನಾಂ ।
ಖಳನಂಗಜನೆನಗಿನ್ನೇಂ
ಕೆಳದೀ, ಅಳಿವಲ್ಲದುಳಿವ ತೆರನಂ ಕಾಣೆಂ ॥

ತೆರೆಯಲ್ಲಿ—ಓಹೊ! ದುಷ್ಟವಾನರನು ಸಂಕಲೆಯನ್ನು ಕಿತ್ತುಕೊಂಡು ಸಿಂಗರತೋಟದಕಡೆ ನುಗ್ಗಿತು ನುಗ್ಗಿತು.

ಸುಸಂ—(ಕೇಳಿ ಬೇಗನೆದ್ದು, ಸಾಗರಿಕೆಯ ಕೈಹಿಡಿದು ಕೊಂಡು) ಸಖಿ! ಏಳು, ಏಳು, ಇದೊ ದುಷ್ಟ ಕಪಿಯು ಈ ಕಡೆಯೇ ಬರುವುದು.

ಸಾಗ— ಸಖಿ ! ಈಗೇನು ಮಾಡೋಣ ?

ಸುಸಂ—ಈ ತಮಾಲವೃಕ್ಷದ ಹೊದರಲ್ಲಿ ಮರೆಯಾಗಿರೋಣ,

(ಇಬ್ಬರೂ ಮರೆಯಲ್ಲಿ ನಿಂತು ನೋಡುತ್ತಿರುವರು).

ಓಹೋ ! ಸಖಿ, ಚಿತ್ರಪಟವನ್ನು ಅಲ್ಲಿಯೇ ಬಿಟ್ಟುಬಂದೆನಲ್ಲ ! ಯಾರಾದರೂ ಕಂಡಾರೋ ಏನೋ ?

ಸುಸಂ— ಏಳೇಳು, ಚಿತ್ರಪಟ ಹಾಗಿರಲಿ, ಈ ದುಷ್ಟವಾನರನು ಮೊಸರನ್ನದ ಆಸೆಯಿಂದ ಸಾರಿಕೆಯ ಪಂಜರದ ಬಾಗಿಲನ್ನು ಕಿತ್ತು ಹಾಕಿ ಹೋಯಿತು. ಅದೊ, ನೋಡು, ಮೇಧಾವಿನಿಯು ಹಾರಿಹೋಗುತ್ತಿದೆ. ಆದುದರಿಂದ ಬೇಗಬಾ. ಅದನ್ನು ಅನುಸರಿಸೋಣ.

(ಇಬ್ಬರೂ ಹೋಗುವರು)

ತೆರೆಯಲ್ಲಿ—ಆಶ್ಚರ್ಯ, ಆಶ್ಚರ್ಯ.

ಸಾಗ—(ನೋಡಿ ಭಯದಿಂದ) ಸಖಿ ! ಸುಸಂಗತೆ ! ಮತ್ತೆ ಆ ದುಷ್ಟವಾನರನು ಬರುವಂತಿದೆಯಲ್ಲಾ.

ಸುಸಂ—(ನಕ್ಕು) ಎಲೆ, ಭೀರುವೇ ! ಭಯಪಡಬೇಡ. ಮಹಾರಾಜನ ಪ್ರಿಯಮಿತ್ರನಾದ ಆರ್ಯ ವಸಂತಕನು ಬರುವನು.

ವಿದೂ—(ಹರ್ಷದಿಂದ ಪ್ರವೇಶಿಸಿ) ಆಶ್ಚರ್ಯ ಆಶ್ಚರ್ಯ, ಭಾಪು ! ಶ್ರೀಖಂಡದಾಸನೇ ಭಾಪು !

ಸಾಗ—(ವಿದೂಷಕನನ್ನು ನೋಡುತ್ತಿರುವಳು)

ಸುಸಂ—ಇವನನ್ನು ನೋಡಿ ನಮಗೇನು ಫಲ ? ಬಾ. ಸಾರಿಕೆಯು ದೂರಹೋಯಿತು, ಬೇಗಬಾ. ಅದನ್ನನುಸರಿಸಿ ಹೋಗೋಣ.

(ಎಂದಿಬ್ಬರೂ ಹೋಗುವರು)

ವಿದೂ—ಭಾಪು ! ಭಾಪು ! ಶ್ರೀಖಂಡದಾಸನೇ ! ನಿನ್ನ ಜಾಣ್ಮೆಯನ್ನು ಮಹಾರಾಜನಿಗೆ ಅರಿಕೆಮಾಡುವೆನು. (ಮುಂದೆನೋಡಿ) ಇದೊ ನಮ್ಮ ಮಹಾರಾಜನು, ಶ್ರೀಖಂಡದಾಸನು ಕೊಟ್ಟ ದೋಹಳ ವಿದ್ಯೆಯಲ್ಲಿ ನಿಜವನ್ನು ಕಾಣುವುದಕ್ಕೆ ಮುಂಚೆಯೇ ತಾನು ಪರಿಗ್ರಹಿಸಿದ ನವಮಾಲಿಕಾಲತೆಯು ಪುಷ್ಪಿತವಾಗಿರುವಂತೆಣಿಸಿ, ಬಹು ಸಂತೋಷದಿಂದ ಕೂಡಿ ಈ ಕಡೆಗೆ ಬರುತ್ತಿರುವನು. ಅವನ ಸಮೀಪಕ್ಕೆ ಹೋಗುವೆನು. (ಎಂದು ಹೋಗುವನು)

ರಾಜ—(ಸಂತೋಷದಿಂದ ಪ್ರವೇಶಿಸಿ)

ಕಂದ ‖ ತಳೆದುತ್ಕಲಿಕೆಯನಾದಂ
ಬೆಳರ್ತುರ್ ಕಡುಬೇಟಗೊಂಡಳಂತೆಸೆ ವುದ್ಯಾ ।
ನಲತೆಯ ನೀಕ್ಷಿಸಿನಾಂ ಪಾ
ಟಲವರ್ಣಂಗೈವೆನಿಂದು ದೇವಿಯ ಮೊಗವಂ ‖

‖ರಾಗ ‖ ಕಾಪಿಜಿಲ್ಲಾ ‖

ಮೆರೆಯುತ್ತಲಿರ್ಪುದೀವನಂ । ಸ್ಮರ
ಲೀಲೆಗಾಯತನಂ । ಪರಕೋಕಿಲಾಳಿ ಶಾರಿ
ಕಾ । ಶುಕೈಕಜೀವನಂ ‖ ೧ ‖
ರಮಣೀಯಜಾತಿಕೇತಕೀ । ಸುಮಸೌರ
ಭಾನ್ವಿತಂ । ಕ್ರಮುಕಾದಿವೃಕ್ಷಕಾವಳೀ ।
ಲತಾಳಿಚಿತ್ರಿತಂ ‖ ೨ ‖
ಲಿಕುಚಾಮ್ರಜಂಬುದಾಡಿಮೀ । ಮುಖಸತ್ಫಲಾ
ವನಿಜಂ । ವಕುಳಪ್ರಸೂನಪಾತಮಂಜುಳಸ್ಥಳಂನಿಜಂ ‖ ೩ ‖

ವಿದೂ—(ಸಮೀಪಕ್ಕೆ ಬಂದು) ಮಿತ್ರನೇ! ದೈವಾನುಕೂಲ್ಯದಿಂದ ವರ್ಧಿಸುವೆಯಾ ? ನಿನ್ನ ದೋಹಳಶಕ್ತಿಯಿಂದ, ನವಮಾಲಿಕೆಯು ಎಡೆಬಿಡದೆ ಮೂಡಿದ ಪುಷ್ಪಗುಚ್ಛಗಳೊಡನೆ ದೇವಿಯಿಂದ ಪರಿಗೃಹೀತ ಮಾದ, ಮಾಧವೀಲತೆಯನ್ನು ನೋಡಿ ನಗುವಂತಿರುವುದು, ನೋಡು.

ರಾಜ—ಅದಕ್ಕೆ ಸಂಶಯವೇನು ? ಮಣಿಮಂತ್ರೌಷಧಗಳ ಪ್ರಭಾವವು ಅಚಿಂತನೀಯವಾದುದು. ಎಲ್ಲಿ ? ಉಪವನದ ದಾರಿಯನ್ನು ತೋರಿಸುತ್ತಾ ನಡೆ. ನಾನೂ ಅದನ್ನು ನೋಡಿ, ನೇತ್ರಾನಂದವನ್ನು ಹೊಂದುವೆನು.

ವಿದೂ—ಮಿತ್ರನೇ ! ಇತ್ತಿತ್ತ ಬರಬೇಕು.

(ಇಬ್ಬರೂ ಮುಂದೆ ಬರುವರು)

ವಿದೂ—(ಭಯದಿಂದ ನೋಡಿ) ಮಿತ್ರನೆ ! ನಡೆನಡೆ. ಪಲಾಯನ ಮಾಡೋಣ, ಈ ವಕುಳ ವೃಕ್ಷದಲ್ಲಿ ಯಾವುದೋ ಒಂದು ಭೂತವಿರುವುದು.

ರಾಜ—ಎಲೆಬೆಪ್ಪನೆ! ತೆಪ್ಪನೆ ನಡೆ, ಭಯಪಡಬೇಡ. ಇಲ್ಲಿ ಭೂತ ಪ್ರಸಕ್ತಿಯೆಂದರೇನು?

ವಿದೂ—ಇದೊ, ಮಾತನಾಡುತ್ತಿದೆ, ನನ್ನ ಮಾತಿನಲ್ಲಿ ನಂಬಿಕೆ ಇಲ್ಲದಿದ್ದರೆ, ಮುಂದೆಬಂದು ಕೇಳು.

ರಾಜ—(ಮುಂದೆಹೋಗಿ ಕೇಳಿ)

ಕಂದ॥ ಇದುಪರಿಕಿಸೆ ಪೆಣ್ಣಾಗಿ
ರ್ಪುದರಿಂದತಿಮಧುರವಾಗಿ ಸಣ್ಣೊಡಲಂ ತಾ।
ಳ್ದಿದಕತದೆ ಮೆಲ್ಲಿತಾಗುಸು
ರ್ವುದು ಸಾರಿಕೆಯೆಂದು ಮನದೊಳೆಣಿಪೆಂ ಮಿತ್ರಾ॥

(ನೋಡಿ) ಇದೊ! ನೋಡು, ನಾನು ಹೇಳಿದ ಹಾಗೆ ಸಾರಿಕೆಯೇ ಅದು.

ವಿದೂ—ನಿಜ, ಸಾರಿಕೆಯೇ ಇದು! ಮಿತ್ರನೆ! ಇದನ್ನೇಕೆ ಭೂತ ವೆಂದು ತಿಳಿದು ಭಯಪಟ್ಟೆ? ನೀನು ಬಹಳ ಭೀತನು.

ರಾಜ—ಎಲೆಮೂರ್ಖನೆ! ಇದೇನು? ನಿನ್ನ ದೋಷವನ್ನು ನನ್ನ ಮೇಲೆ ಹಾಕುವೆ?

ವಿದೂ—ತಾಳುತಾಳು, ಹಾಗೆಂದವನು ನಾನೋ ನೀನೋ? ಈಗ ತಿಳಿದು ಹೇಳುವೆನು. (ಎಂದು ದಂಡವನ್ನೆತ್ತಿ) ಎಲೆ ತೊತ್ತಿನಕೂಸೆ! ನೀನು ಹೇಗೆ ತಿಳಿದಿದ್ದೀಯೆಯೋ ಹೇಳು? ಮಹಾರಾಜನು ಭೀತನೋ? ವಸಂತಕನು ಭೀತನೋ? ನೀನು ಹೇಳದಿದ್ದರೆ ಚಾಡಿಕಾರರ ಹೃದಯ ದಂತೆ ಕುಟಿಲವಾದ ದಂಡಕಾಷ್ಠದಿಂದ ಕುಟ್ಟಿ, ಬೇಲದ ಹಣ್ಣಿನಂತೆ ಈ ವಕುಳವೃಕ್ಷದ ದೆಸೆಯಿಂದ ನಿನ್ನನ್ನು ಕೆಡಹುವೆನು. (ಹೊಡೆಯಲು ಯತ್ನಿಸುವನು)

ರಾಜ—ಮೂರ್ಖನೇ! ನಿಲ್ಲು ನಿಲ್ಲು; ಈ ಸಾರಿಕೆಯೇನೋ ರಮಣೀಯವಾಗಿ ನುಡಿವುದು, ಅದನ್ನೇಕೆ ಭಯಪಡಿಸುವೆ?

ವಿದೂ—ಆದರೆ ಬಿಟ್ಟೆ.

(ಇಬ್ಬರೂ ಕೇಳುವರು)

ವಿದೂ—ಮಿತ್ರನೇ ! “ ಈ ಬ್ರಾಹ್ಮಣನಿಗೆ ಒಳ್ಳೆಯ ಭೋಜನವನ್ನು ಕೊಡು ” ಎಂದು ಹೇಳುವುದು.

ರಾಜ—ಹೊಟ್ಟೆಬಾಕರಿಗೆ ಎಲ್ಲೂ ಊಟದಲ್ಲೇ ಪರ್ಯವಸಾನ. ತಾಳು ಚೆನ್ನಾಗಿ ಕೇಳೋಣ.

ಶಾರಿಕೆ—“ ನನ್ನನ್ನು ಇಲ್ಲಿ ಏತಕ್ಕೆ ಬರೆದೆ ? ನೀನು ಎಂತಹ ಕಾಮದೇವನನ್ನು ಬರೆದೆಯೋ ನಾನು ಅಂತಹ ರತಿದೇವಿಯನ್ನು ಬರೆದೆನು, ವೃಥಾ ಏತಕ್ಕೆ ಕೋಪಿಸುವೆ ? ”

ವಿದೂ—ಏನೋ ಅಸಂಬದ್ಧಪ್ರಲಾಪಮಾಡುವುದು. ನಡೆ ಹೋಗೋಣ.

ರಾಜ—ಹಾಗಲ್ಲ.

ವಿದೂ—ಹಾಗಲ್ಲದಿದ್ದರೆ ಇನ್ನೇನು ? ಹೇಳು.

ರಾಜ—ಯಾವಳೋ ಒಬ್ಬಳು, ಯಾವನೋ ಒಬ್ಬನಲ್ಲಿ ಮನ ಸೋತು, ಆತನನ್ನು ಚಿತ್ರಿಸಿ ಸಖಿಯೊಡನೆ ಕಾಮದೇವನೆಂದು ಮಾಜಿರುವಳು. ಆ ಸಖಿಯು, ಅದನ್ನು ಜಾಣತನದಿಂದ ತಿಳಿದು, ಆಕೆಯನ್ನೂ ಆ ಚಿತ್ರದಲ್ಲಿ ಬರೆದು ರತಿದೇವಿಯೆಂದು ಮಾಜಿದಳೆಂಬುದನ್ನು ಹೇಳುತ್ತದೆಂದೆಣಿಸುವೆನು.

ವಿದೂ—(ಶಾರಿಕೆಯನ್ನೂ ರಾಜನನ್ನೂ ಚೆನ್ನಾಗಿ ನೋಡಿ) ಹೌದು, ಹೌದು. (ಎಂದು ಚಿಟಿಕೆ ಹಾಕುವನು)

ರಾಜ—ಗಲಭೆಮಾಡದೆ ಸುಮ್ಮನಿರು. ಇನ್ನೇನು ಹೇಳುವುದೋ ಕೇಳೋಣ.

ವಿದೂ—ಅಪ್ಪಣೆ (ಎಂದು ಸುಮ್ಮನಿರುವನು)

ಶಾರಿಕೆ—(ತೆರೆಯಲ್ಲಿ) “ ಎಲೆಸಖಿ ! ನಾಚಿಕೆಪಡಬೇಡ, ಇಂತಹ ಕನ್ಯಾರತ್ನಕ್ಕೆ, ಅಂತಹ ಅರಸುಮಗನಲ್ಲಿ ಬಯಕೆಯುಂಟಾಗತಕ್ಕುದು ಯುಕ್ತವೇ ಸರಿ. ”

ವಿದೂ—ಮಿತ್ರನೇ ! ನಾನೇ ಬಲ್ಲೆನೆಂದು ಗರ್ವಿಸಬೇಡ, ನಾನು ಹೀಗೆ ಹೇಳುವೆನು. ಯಾವಸ್ತ್ರೀಯು ಬರೆಯಲ್ಪಟ್ಟಿರುವಳೋ ಆಕೆ ರಮ್ಯವಾಗಿದ್ದಾಳೆಂದು.

ರಾಜ—ವಸಂತಕನೇ ! ಸುಮ್ಮನಿರು. ಅವಧಾನದಿಂದ ಕೇಳೋಣ. ಏನೋ ಕುತೂಹಲಕ್ಕೆ ಅವಕಾಶವುಂಟಾಗಿರುವುದು.

ಶಾರಿಕೆ—(ತೆರೆಯಲ್ಲಿ) ಎಲೆಸಖಿ ! ಈ ತಾವರೆಯೆಲೆಗಳನ್ನೂ, ಈ ತಾವರೆಯ ದಂಟುಗಳನ್ನೂ ತೆಗೆ, ವೃಥಾ ನನ್ನ ಶರೀರವನ್ನು ಏತಕ್ಕೆ ಆಯಾಸಪಡಿಸುವೆ ?

ವಿದೂ—ತಾಳು ತಾಳು ; ತೊತ್ತಿನಮಗನದು ಇನ್ನೇನೋ ಗೊಣಗುಟ್ಟುವುದು. ಅದನ್ನೆಲ್ಲಾ ಚೆನ್ನಾಗಿ ತಿಳಿದು, ವಿವರಿಸುವೆನು.

ರಾಜ—ಚೆನ್ನಾಗಿ ಹೇಳಿದೆ, ಇನ್ನೂ ಕೇಳು.

ಶಾರಿಕೆ—(ತೆರೆಯಲ್ಲಿ "ಎಳಸಿದಜನಂ" ಎಂಬ ಕಂದವನ್ನು ಹೇಳುವುದು)

ವಿದೂ—ಇದೊ, ತೊತ್ತಿನಮಗನದು ಹಾರುವನಂತೆ ಮತ್ತೇನೊ ಋಕ್ಕುಗಳನ್ನು ಹೇಳುವುದು, ಕೇಳು.

ರಾಜ—ನನ್ನ ಮನಸ್ಸೆಲ್ಲೋ ಇತ್ತು, ಅದೇನು ಋಕ್ಕನ್ನೋದಿತು ಹೇಳು.

ವಿದೂ—("ಎಳಸಿದಜನಂ" ಎಂಬ ಕಂಡವನ್ನು ಹೇಳುವನು)

ರಾಜ—ಭಲೆ ! ಬ್ರಾಹ್ಮಣನೆ ! ಭಲೆ ! ನೀನಲ್ಲದೆ ಈ ಋಕ್ಕನ್ನು ಇನ್ನಾವನುತಾನೆ ತಿಳಿದಾನು ? ನಿನ್ನಂತಹ ಬ್ರಾಹ್ಮಣನಿಗೆ ಇದೇತಾನೆ ಋಕ್ಕು ?

ವಿದೂ—ಆದರೆ, ಇದು ಇನ್ನೇನು ?

ರಾಜ—ಇದು, ಯಾವಳೋ ಒಬ್ಬ ಜವ್ವನೆಯು ತನ್ನ ಮನೋವಲ್ಲಭನನ್ನು ಸೇರಲು ದಾರಿಯಿಲ್ಲದೆ, ತನ್ನ ಬಾಳಿಕೆಯಲ್ಲಿ ನಿರಾಶಳಾಗಿ, ಹೇಳಿದ ಪದ್ಯವು.

ವಿದೂ—(ಕೈಚಪ್ಪಾಳೆಹಾಕಿ ನಕ್ಕು,) ಮಿತ್ರನೇ ! ಇಂತಹ ವಕ್ರೋಕ್ತಿಗಳನ್ನು ಏತಕ್ಕಾಡುವೆ? ಯಾವಳೋ ಒಬ್ಬ ಕನ್ಯೆ, ನಿನ್ನನ್ನು ಸೇರುವುದಕ್ಕೆ ದಾರಿಯಿಲ್ಲದೆ ಹೇಳಿದುದೆಂದು ಹೇಳಲಾಗದೇ ? ಅಲ್ಲದಿದ್ದರೆ ಕಾಮನೆಂದು ಅಪಲಪಿಸುವುದಕ್ಕೆ ತಕ್ಕ ಪುರುಷನು ನೀನಲ್ಲದೆ ಇನ್ನಾವನಿದ್ದಾನು ?

ರಾಜ—ಛೀ ! ಮೂರ್ಖನೇ ! ನೀನು ನಕ್ಕು ಗಲಭೆ ಮಾಡಿದುದರಿಂದ ಶಾರಿಕೆಯು ಭಯಪಟ್ಟು ಹಾರಿಹೋಯಿತು.

ವಿದೂ—(ನೋಡಿ) ಇದೊ, ಶಾರಿಕೆಯು ಕದಳೀಗೃಹದ ಒಳಗೆ ಹೋಯಿತು, ನಾವೂ ಅಲ್ಲಿಗೆ ಹೋಗೋಣ ಬಾ.

ರಾಜ—ನಡೆ,

ಕಂದ ॥ ಕೆಳದಿಯರಿದಿರೊಳ್ ಮದನಾ
ಕುಳೆ ಕಾಮಿನಿ ನುಡಿದ ನುಡಿಯನಾಲಿಸಿ ಬಳಿಕಂ ।
ಗಿಳಿಸಾರಿಕೆಗಳ್ ನುಡಿವಾ
ಗಳದಂ ಕೇಳ್ದಿನಿಯರಲ್ತೆ ಧನ್ಯರ್ ಜಗದೊಳ್ ॥

(ರಾಜನೂ ವಿದೂಷಕನೂ ಕದಳೀಮಂಟಪಕ್ಕೆ ಬರುವರು)

ವಿದೂ—ಇದೊ! ಇದೇ ಕದಳೀಮಂಟಪವು, ಬಾ, ಪ್ರವೇಶ ಮಾಡೋಣ. ಮಿತ್ರನೇ ! ಆ ಸಾರಿಕೆಯಿಂದ ನಮಗಾಗತಕ್ಕುದೇನಿದೆ ? ಮಂದಮಾರುತನಿಂದ ತೂಗುತ್ತಿರುವ ಎಳೆಬಾಳೆಲೆಗಳಿಂದ ಶೀತಲವಾದ ಈ ಶಿಲಾತಲದಲ್ಲಿ ಕುಳಿತುಕೊಂಡು ವಿಶ್ರಮಿಸಿಕೊಳ್ಳೋಣ.

ರಾಜ—ನಿನ್ನ ಇಷ್ಟವಿದ್ದಂತಾಗಲಿ, (ಇಬ್ಬರೂ ಕುಳಿತುಕೊಳ್ಳುವರು)

ವಿದೂ—ಇದೊ ನೋಡು, ಆ ದುಷ್ಟ ವಾನರನು ಬಾಗಿಲನ್ನು ಕಳೆದ ಪಂಜರವಿಲ್ಲಿ ಬಿದ್ದಿರುವುದು. ಇದು ಆ ಶಾರಿಕೆಯದೇ ಆಗಿದ್ದೀತು,

ರಾಜ—ಮಿತ್ರನೇ ! ಹೋಗಿನೋಡು.

ವಿದೂ—(ಸ್ವಲ್ಪದೂರ ಹೋಗಿ) ಓಹೋ ! ಚಿತ್ರಪಟವು ಬೇರೆ ಇಲ್ಲಿ ಬಿದ್ದಿರುವುದು. (ತೆಗೆದುಕೊಂಡು ನೋಡಿ) ಮಿತ್ರನೇ ! ದೈವಾನುಕೂಲದಿಂದ ವರ್ಧಿಸುವೆಯಾ ?

ರಾಜ—ಎಲೈ ಮಿತ್ರನೇ ! ಅದೇನು ಹೀಗೆನ್ನುವೆ ?

ವಿದೂ—ಇನ್ನೇನು ? ನಾನು ಮೊದಲು ಹೇಳಿದುದೇ. ನೀನಲ್ಲದೆ ಕಾಮನೆಂದು ನೆಪವಿಟ್ಟು ಹೇಳುವುದಕ್ಕೆ ತಕ್ಕವರು ಇನ್ನಾರು ?

ರಾಜ—(ಮುಖವನ್ನು ತಗ್ಗಿಸಿಕೊಂಡು) ಮಿತ್ರನೇ ! ಎಲ್ಲಿ, ಕೊಡು, ನೋಡೋಣ.

ವಿದೂ--ಓಹೋ ! ನಾನು ಕೊಡುವುದಿಲ್ಲ. ಇದರಲ್ಲಿ ಯಾವಳೋ ಒಬ್ಬ ಸ್ತ್ರೀಯು ಬರೆಯಲ್ಪಟ್ಟಿರುವಳು ; ಏನಾದರೂ ಉಡುಗೆರೆಯನ್ನು ಕೊಟ್ಟರೆ ತೋರಿಸುವೆನು ; ಇಲ್ಲದಿದ್ದರೆ ಇಂತಹ ಕನ್ಯಾರತ್ನವನ್ನು ಸುಮ್ಮನೆ ಎಂದಿಗೆತಾನೆ ಕೊಟ್ಟೇನು ?

ರಾಜ—(ಬಲಾತ್ಕಾರದಿಂದ ಕಿತ್ತುಕೊಂಡು ಆಶ್ಚರ್ಯದಿಂದ)

॥ರಾಗ॥ಕೇದಾರಗೌಳ॥ ಛಾಪು.

ಆವಳೀನಾರೀ । ಏವೇಳ್ಬೈ ವೈಯ್ಯಾರಿ ॥ ಪ ॥
ಭಾವಜಲೀರೋಪವನಮಯೂರೀ ॥ ಅ ॥
ಅಡಿಯಿಂದಲಬ್ಜವ । ನಡಿಮಾಡಿ ಹಂಸೆಯೊಳ್ ।
ಕಡುಗಿಮಾನಸವತಾ । ನೊಡನೆಪ್ರವೇಶಿಪ ॥ ೧ ॥
ನಗೆಗೂಡಿದಿವಳ । ಮೊಗಸಸಿಗ್ಯೆಗಂದು ।
ಮುಗಿಯೆ ಪೀಠಾಬ್ಜವು । ಬಗೆಗುಂದಿದಂ ವಿಧಿ ॥ ೨ ॥

(ಸುಸಂಗತೆ ಸಾಗರಿಕೆಯರ ಪ್ರವೇಶ)

ಸಾಗರಿಕೆ—ಸಖಿ ! ಶಾರಿಕೆಯಂತೂ ಸಿಕ್ಕಲಿಲ್ಲ, ಒಳ್ಳೆಯದು, ಈ ಕದಳೀಮಂಟಪಕ್ಕೆ ಹೋಗಿ ಚಿತ್ರಪಟವನ್ನಾದರೂ ತೆಗೆದುಕೊಂಡು ಬರೋಣ.

ವಿದೂ—(ಪಟವನ್ನು ನೋಡುತ್ತಾ) ಇದೇನಿವಳು ಕಂಚನಿದುಂಬಿ ದಂತೆ ಬರೆಯಲ್ಪಟ್ಟಿರುವಳು.

ಸುಸಂಗತೆ—ಎಲೆ ಸಖಿ ! ವಸಂತಕನೇನೋ ಮಾತಾಡುವಂತಿದೆ. ಆದುದರಿಂದ ಮಹಾರಾಜನೂ ಇಲ್ಲಿಯೇ ಇರಬಹುದು ; ನಾವು ಈ ಬಾಳೆಯ ಪೊದರಿನಲ್ಲಿ ಮರೆಯಾಗಿರೋಣ. (ಎಂದು ನೋಡುತ್ತಿರು ವರು)

॥ ರಾಗ ॥

ರಾಜ—ನಿರುಕಿಸಲೀಕೆ । ಸ್ಮರನಪತಾಕೆ । ಗುರು
ಕುಚ ಲಕುಚಜಿತಕೋಕೆ । ಸರಸಾವಲೋಕೆ ॥

ಸುಸಂ—ಸಖಿ ! ನಿನಗೆ ದೈವವು ಅನುಕೂಲಿಸಿತು. ಇದೊ, ನಿನ್ನ ಪ್ರಿಯನು ನಿನ್ನನ್ನೇ ನೋಡುತ್ತಿರುವನು.

ಸಾಗ—(ಲಜ್ಜೆಯಿಂದ) ಸಖಿ ! ಇದೇನು ನೀನು ನನ್ನನ್ನೇ ಪರಿಹಾಸಮಾಡುವೆ ?

ವಿದೂ—(ರಾಜನನ್ನು ತಿವಿದು) ಮಿತ್ರನೆ ! ಇವಳು ಕಂಬನಿದುಂಬಿದಂತೆ ಬರೆಯಲ್ಪಟ್ಟಿರುವಳೇಕೆ ?

ರಾಜ—ಮಿತ್ರನೇ ! ಸಾರಿಕೆ ಹೇಳಿದ ಪದ್ಯದಿಂದಲೇ ಎಲ್ಲಾ ತಿಳಿದಿರುವುದಲ್ಲಾ ! ಇನ್ನೇತಕ್ಕೆ ಕೇಳುವೆ ?

ಸುಸಂ—ಸಖಿ ! ಶಾರಿಕೆಯು, ಮೇಧಾವಿನಿಯೆಂಬ ತನ್ನ ಹೆಸರನ್ನು ಸಾರ್ಥಕಮಾಡಿಕೊಂಡಿತು.

ವಿದೂ—ಮಿತ್ರನೇ! ಇವಳು ನಿನ್ನ ಕಣ್ಣಿಗೆ ಆನಂದವನ್ನುಂಟುಮಾಡುವಳೇನು?

ಸಾಗ—(ಭಯದಿಂದ) ಮಹಾರಾಜನು ಈಗ ಏನುಹೇಳುವನೋ ಕಾಣೆನಲ್ಲ.

ರಾಜ—ಮಿತ್ರನೇ ! ಆನಂದಪಡಿಸುವಳೇ ಎಂದು ಸಂದೇಹಪಡುವೆಯಾ ? ಕೇಳು.

ಕಂದ ॥ ಸುತ್ತಿ ನಿತಂಭಸ್ಥಳದೊಳ್
ವೃತ್ತಕುಚಾದ್ರಿಗಳನೇರಿ ಪಿರಿದುಂ ಬಾಯಾ ।
ರುತ್ತೆನ್ನ ದೃಷ್ಟಿ ಕಂಬನಿ
ವೆತ್ತೀಕೆಯ ಕಣ್ಗಳಂ ನಿರೀಕ್ಷಿಪುದೊಲವಿಂ ॥

ಸುಸಂ—ಸಖಿ ! ಕೇಳಿದೆಯಾ ?

ಸಾಗ—ನೀನೇ ಕೇಳು ; ನೀನುಬರೆದ ಚಿತ್ರಪಟವನ್ನು ತಾನೆ ವರ್ಣಿಸುತ್ತಿರುವನು.

ರಾಜ—ಕಂದ ॥ ಈಕೆಯ ಮುಖಶಶಿಯಂ ವಾ
ಣೀಕಾಂತಂ ಮಾಡಿದಂದು ಮುಗಿದಾಸನನಾ ॥
ಳೀಕದವೊನೆಯೆತ್ತಲ್ ಸು
ವ್ಯಾಕುಲಮನನೆನಿಸಿ, ಮಂಡಿಸಿಕ್ಕುರ್ಗಂ ನಿಜದಿಂ ॥

ವಿದೂ—ಇಂತಪ್ಪ ಕನ್ಯಾರತ್ನವು, ನಿನ್ನ ಆಕೃತಿಯಂ ಪಟದಲ್ಲಿ

ಬರೆದು ನೋಡಿನೋಡಿ ನಿನ್ನನ್ನು ಕೂಡಲು ಹಂಬಲಿಸುತ್ತಿರುವಳಲ್ಲ! ನಿನಗೇನು ಕೊರತೆ ಹೇಳು ? ನಿನ್ನ ರೂಪನ್ನು ನೀನೇಕೆ ನೋಡುವೆ ? ಇಲ್ಲಿ ತಾ.

ರಾಜ—ಈಕೆಯು ತನ್ನ ಕೈಯಾರೆ ನನ್ನನ್ನು ಬರೆದಿರುವುದೇ ನನಗೊಂದು ಬಹುಮಾನವಲ್ಲವೆ ? ಹೀಗಿರುವಾಗ, ನಾನು ಹೇಗೆತಾನೆ ನೋಡದೆ ಇರಲಿ ? (ನೋಡುತ್ತಾ) ಎಲೈ ಮಿತ್ರನೇ ! ನೋಡುನೋಡು

ಕಂದ ॥ ಬರೆವಂದಾಕೆಯ ಕಣ್ಗಳಿ
ನುರುಳಿದ ಬಾಷ್ಪಾಂಬುಶೀಕರಂ ಕರವೆಸೆಗುಂ ॥
ಪರಿಕಿಸಲೆನ್ನೊಡರೊಳ್ ತ
ತ್ಕರ ಸಂಸ್ಪರ್ಶನದೊಳೊಗೆದ ಬೆಮರ್ವನಿಗಳವೊಲ್॥

ಸಾಗ—(ಸ್ವಗತ) ಎಲೆ ಮನಸ್ಸೆ ; ಸಂತೈಸಿಕೊ. ನಿನ್ನ ಮನೋರಥ ಸಂಪತ್ತು ಇಷ್ಟು ಅತಿಶಯಕ್ಕೆಡೆಯಾಯಿತಲ್ಲ !

ಸುಸಂ—ಎಲೆಸಖಿ ! ಲೋಕದಲ್ಲಿ ನೀನೇ ಧನ್ಯಳು. ಮಹಾರಾಜನುಕೂಡ ನಿನ್ನನ್ನು ಇಷ್ಟು ಹೊಗಳುತ್ತಿರುವನಲ್ಲ !

ವಿದೂ—(ಪಾರ್ಶ್ವವನ್ನು ನೋಡಿ) ಮಿತ್ರನೇ ! ಇದುಬೇರೆ, ನೋಡು, ತಾವರೆಯೆಲೆಯ ಹಾಸಿಗೆಯು ಭಾವಕಿಯ ವಿರಹಾವಸ್ಥೆಯನ್ನು ಸೂಚಿಸುವುದು.

ರಾಜ—ಮಿತ್ರನೇ ! ಚೆನ್ನಾಗಿ ತಿಳಿದೆ, ಹಾಗೆಯೇ ಸರಿ.

॥ ರಾಗ ॥ ತಾಳ ॥

ನಳಿನೀ ದಳಾ । ವಳಿತಲ್ಪವು । ನಳಿನಾಕ್ಷಿಯು ।
ಮ್ಮಳವೇಳ್ವುದು ॥ ಪ ॥
ತರುಣೀಸ್ತನ । ಭರದಿಂದಲಿ । ನೆರೆಬಾಡಿದಂ ।
ತಿರೆತೋರುವೀ ॥ ೧ ॥
ಕೃಶಮಧ್ಯವ । ನಸುಸೋಂಕದೆ । ಪಸುರಾಗಿ ರಂ ।
ಜಿಸತೋರುವೀ ॥ ೨ ॥

ವಿದೂ—(ಬಿದ್ದಿರುವ ತಾವರೆಯ ಮಾಲಿಕೆಯನ್ನು ತೆಗೆದುಕೊಂಡು) ಮಿತ್ರನೆ ! ಇದೊ, ನೋಡು, ಆ ಕಾಂತೆಯ ಕಠಿನಸ್ತನ ಪೀಡನೆಯಿಂದ ಕಂದಿರುವ ಕೋಮಲ ಮೃಣಾಳಹಾರವು.

ರಾಜ—ಎಲ್ಲಿ? ಮಿತ್ರನೇ! ಕೊಡು, (ತೆಗೆದುಕೊಂಡು ತನ್ನ ಎದೆಯಮೇಲಿಟ್ಟುಕೊಂಡು) ಎಲೆ ಮೃಣಾಳಮಾಲಿಕೆಯೆ! ನಿನ್ನ ಜಡ ಸ್ವಭಾವವನ್ನು ಏನು ಹೇಳಲಿ!

ಕಂದ ॥ ನೀರೆಯ ಗುರುಕುಚದೆಡೆಯಿಂ
ಜಾರಿದೆನೆಂದೇಕೆ ಕಂದಿದಪೆ ಪೇಳ್ ನಿನ್ನೊಳ್ ।
ತೋರುವ ಸಣ್ಣೆಳೆಯುಮಂ ಪುಗ
ಲಾರದೆನಲ್ಕಲ್ಲಿ ನಿನಗದೆಂತೆಡೆಯಕ್ಕುಂ ॥

ಸುಸಂಗತೆ—(ಸ್ವಗತ) ಹಾ! ತೆಗೆ ತೆಗೆ, ಮಹಾರಾಜನು ಮಿತಿ ಮೀರಿದನುರಾಗದಿಂದ ಅಸಂಬದ್ಧವಾಗಿ ಮಾತನಾಡತೊಡಗಿದನು. ಇನ್ನು ಉಪೇಕ್ಷಿಸುವುದು ಯುಕ್ತವಲ್ಲ. (ಪ್ರಕಾಶ) ಸಖಿ! ನೀನು ಯಾವುದನ್ನು ಇಚ್ಛಿಸಿ ಬಂದೆಯೋ ಅದು ನಿನ್ನಮುಂದೆಯೇ ಇರುವುದು.

ಸಾಗರಿಕೆ—ಅದೇನು? ನಾನು ಯಾವುದನ್ನು ಇಚ್ಛಿಸಿ ಬಂದೆ?

ಸುಸಂಗತೆ—ನೀನು ಚಿತ್ರಪಟವನ್ನು ಇಚ್ಛಿಸಿ ಬಂದೆಯಲ್ಲವೆ? ಆದುದರಿಂದ ಅದನ್ನು ತೆಗೆದುಕೊ.

ಸಾಗರಿಕೆ—(ಕೋಪದಿಂದ) ನಿನ್ನ ಕೊಂಕುನುಡಿಯನ್ನು ತಿಳಿಯುವುದಕ್ಕೆ ನಾನು ಅಷ್ಟು ಚದುರೆಯಲ್ಲ. ತೆಗೆ, ಇಂತಹ ಮಾತುಗಳನ್ನು ನಾನು ಕೇಳಲಾರೆ. (ಹೊರಡುವಳು)

ಸುಸಂಗತೆ—(ಹಿಡಿದು ನಿಲ್ಲಿಸಿ) ಎಲೆ ಮುನಿಸುಗಾತಿ! ಸ್ವಲ್ಪ ಇಲ್ಲಿರು, ನಾನೇ ಕದಳೀಮಂಟಪಕ್ಕೆ ಹೋಗಿ, ಚಿತ್ರಪಟವನ್ನು ತೆಗೆದು ಕೊಂಡು ಬರುವೆನು. (ರಾಜನ ಸಮೀಪಕ್ಕೆ ಹೋಗುವಳು)

ವಿದೂಷಕ—ಮಿತ್ರನೇ! ಚಿತ್ರಪಟವನ್ನು ಮುಚ್ಚುಮುಚ್ಚು. ಅದೊ, ದೇವಿಯ ಪರಿಚಾರಿಣಿಯಾದ ಸುಸಂಗತೆಯು ಬರುವಳು.

ರಾಜ—(ಚಿತ್ರಪಟವನ್ನು ಮುಚ್ಚಿಕೊಳ್ಳುವನು)

ಸುಸಂಗತೆ—(ಪ್ರವೇಶಿಸಿ) ಮಹಾರಾಜನಿಗೆ ವಿಜಯವಾಗಲಿ.

ರಾಜ—ಎಲೆ ಸುಸಂಗತೆ! ನಿನಗೆ ಸುಖಾಗಮನವೇ? ನಾವು ಇಲ್ಲಿರುವುದನ್ನು ನೀನು ಹೇಗೆ ತಿಳಿದೆ? ಬಾ, ಇಲ್ಲಿ ಕುಳಿತುಕೊ.

ಸುಸಂಗತೆ—ತಾವು ಇರುವುದನ್ನು ತಿಳಿದುದೊಂದೇ ಅಲ್ಲ, ಚಿತ್ರಪಟ ಮೊದಲಾದ ಎಲ್ಲಾ ಸಂಗತಿಗಳನ್ನೂ ತಿಳಿದಿರುವೆನು. ಆದುದರಿಂದ ಇದನ್ನೆಲ್ಲಾ ಈಕ್ಷಣವೇ ಹೋಗಿ ರಾಣಿಗೆ ಅರಿಕೆಮಾಡುವೆನು.

ವಿದೂಷಕ—ಇವಳು ಹೇಳುವುದೇನೋ ನಿಜ, ಬಲುಬಾಯಾಳಿ.

ರಾಜ— ಚೆನ್ನಾಗಿ ಹೇಳಿದೆ. (ಸುಸಂಗತೆಯ ಕೈಹಿಡಿದು) ತನ್ನ ಕೊರಳಿನ ಹಾರವನ್ನು ಕೊಟ್ಟು) ಎಲೆ ಸುಸಂಗತೆ! ಏನೋ ಸುಮ್ಮನೆ ವಿನೋದಪಡುತ್ತಿದ್ದುದೇ ಹೊರತು ಮತ್ತೆಬೇರೆ ಇಲ್ಲ. ಆದುದರಿಂದ ದೇವಿಯನ್ನು ವೃಥಾ ಆಯಾಸಪಡಿಸಬೇಡ. (ಹಾರವನ್ನು ಕೊಡುವನು)

ಸುಸಂ—(ನಮಸ್ಕರಿಸಿ) ಮಹಾರಾಜನೆ! ನೀನೇತಕ್ಕೆ ಸಂದೇಹಪಡುವೆ? ಏನೋ ವಿನೋದಕ್ಕಾಡಿದೆನು. ನನಗೇಕೀ ರತ್ನಹಾರವು? ನಿನ್ನನುಗ್ರಹವೇ ಸರ್ವಾಭರಣವಾಗಿರುವುದು. ನನ್ನನ್ನು ಏತಕ್ಕೆ ಸಂತಯಿಸುವೆ?

ರಾಜ—ಇನ್ನಾರನ್ನು ಸಂತಯಿಸಬೇಕು?

ಸುಸಂಗತೆ—“ನನ್ನನ್ನು ಈ ಚಿತ್ರಪಟದಲ್ಲಿ ಏತಕ್ಕೆ ಬರೆದೆ” ಎಂದು ಕೋಪಿಸಿಕೊಂಡ ಸಾಗರಿಕೆಯು ಈ ಕದಳೀಮಂಟಪದ ಹಿಂದಿರುವಳು. ಅಲ್ಲಿಗೆ ಬಿಜಯಂಗೈದು, ಅವಳನ್ನು ಸಂತಯಿಸುವನಾಗು.

ರಾಜ—(ಎದ್ದು) ಎಲ್ಲಿ ತೋರಿಸುತೋರಿಸು! (ಚಿತ್ರಪಟವನ್ನು ಮರೆಯುವನು)

ವಿದೂಷಕ—ಇದು ಸಮಯಕ್ಕೆ ಬೇಕಾಗುವುದು; ಜತನವಾಗಿಟ್ಟುಕೊಂಡಿರುವೆನು. (ಚಿತ್ರಪಟವನ್ನು ಕಂಕುಳಲ್ಲಿ ಇಡುವನು)

ಸುಸಂ—ಮಹಾರಾಜನೇ! ಇದೊ, ಇಲ್ಲಿರುವಳು.

(ಎಲ್ಲರೂ ಮುಂದೆ ಬರುವರು)

ಸಾಗ—(ಮಹಾರಾಜನನ್ನು ನೋಡಿ, ಹರ್ಷಭಯಗಳಿಂದಕೂಡಿ ಸ್ವಗತಂ) ಇನ್ನೇನುಗತಿ, ಮಹಾರಾಜನನ್ನು ನೋಡಿದುದರಿಂದ, ಹೋಗುವೆನೆಂದರೆ ಕಾಲುಗಳೇ ಬಾರವು. ಇದಕ್ಕೇನುಮಾಡಲಿ?

ವಿದೂ—(ಸಾಗರಿಕೆಯನ್ನು ನೋಡಿ) ಆಶ್ಚರ್ಯ, ಆಶ್ಚರ್ಯ! ಇಂತಹ ರೂಪುಳ್ಳ ಸ್ತ್ರೀಯನ್ನು ನಾನು ಮನುಷ್ಯಲೋಕದಲ್ಲೇ ಕಾಣಲಿಲ್ಲ. ಮಿತ್ರನೆ!

ಈಕೆಯನ್ನು ಬ್ರಹ್ಮನು ಕೂಡಾ, ನಿರ್ಮಿಸಿದ ಒಳಿಕ ನೋಡಿ ಆಶ್ಚರ್ಯ ಪಟ್ಟಿರಬಹುದೆಂದು ಊಹಿಸುವೆನು.

ರಾಜ—ನಾನೂ ಹಾಗೆಯೇ ಎಣಿಸುವೆನು.

ರಾಜ—ಕಂದ॥ ನಿರುಕಿಸಿದನಕ್ಕು ಕಣ್ಣಿಂ ।
ಟರಿನುಂ ತಾಂನಾಲ್ಕುವೊಗದೆ ಪೊಗಳಿದನಕ್ಕುಂ ॥
ನೆರೆ ತೊನೆದನಕ್ಕು ನಾಲ್ಕುಂ ।
ಸಿರಗಳನಿವಳೊಡಲಸೃಜಿಸುವಂದಜ್ಜಭವಂ ॥

ಸಾಗ—(ಕೋಪದಿಂದ ಸುಸಂಗತೆಯನ್ನು ನೋಡಿ) ಎಲೆ ಸುಸಂಗತೆ! ಇದೇಯೋ ನೀನುತಂದ ಚಿತ್ರಪಟ? (ಎಂದು ಹೊರಡುವಳು)

ರಾಜ—(ತಡೆದು)

॥ ರಾಗ ॥

ಪೋಗಬೇಡವೆಬಾ । ನಾಗವೇಣಿಯೆನೀಂ ॥ ಪ ॥
ರಾಗವನುಳಿದು । ಬೇಗದಿಂದಲಿನೀಂ ॥ ಅ ॥
ನೀರೆಕೋಪವ । ನೇರಿನೋಡಿದರು ।
ಕ್ರೂರವಲ್ಲನಿ । ನ್ನೀರೆನೋಟವಿದು ॥ ೧ ॥
ಇಂಬೆನಿಸಿದನಿ । ತಂಭಭಾರದಿನೀಂ ।
ಮುಂಬರಿಯಲು । ಹಂಬಲಿಪರೆನೀಂ ॥ ೨ ॥
ಗುರುಕುಚಂಗಳ । ಭರಕೆಮಧ್ಯವು ।
ಮುರಿವುದೆಂದುನಾಂ । ಮರುಗುತಿರ್ಪೆನೀಂ ॥ ೩ ॥

ಸುಸಂ—ಮಹಾರಾಜನೆ! ಈಕೆ ಬಲು ಮುನಿಸುಗಾತಿ, ಇವಳನ್ನು ನೀನೆ ಕೈಹಿಡಿದು ನಿಲ್ಲಿಸು.

ರಾಜ—(ಸಾಗರಿಕೆಯನ್ನು ನೋಡಿ) ನೀನು ಹೇಳಿದುದು ನಿಜ. (ಸಾಗರಿಕೆಯ ಕೈಹಿಡಿಯುವನು)

ವಿದೂ—ಮಹಾರಾಜನೆ! ಭಾಪು! ಅಪೂರ್ವಳಾದ ಶ್ರೀದೇವಿಯನ್ನು ಪಡೆದೆ,

ರಾಜ—ಹಾಗೆಯೇಸರಿ.

ಕಂದ ॥ ಸಿರಿಈಕೆ ನಿಜದಿನೀಕೆಯ
ಕರತಲವೇ ಪಾರಿಜಾತಪಲ್ಲವಮಕ್ಕುಂ ॥

ಕರಮಲ್ಲದೊಡೆಂತದರಿಂ
ಸುರಿವುದು ಬೆಮರ್ವನಿಯನೆಪದೊಳಮೃತದ ಪನಿಗಳ್ ‖

ಪ್ರಿಯೆ, ಸೈರಿಸು ಸೈರಿಸು, ಸಖಿಯೊಡನೆ ಕೋಪಿಸುವುದು ನಿನಗೆ ಯುಕ್ತವಲ್ಲ.

ಸುಸಂ—ಸಖಿ! ನೀನಲ್ಲವೇ ಧನ್ಯಳು? ಮಹಾರಾಜನೇ ನಿನ್ನನ್ನು ಕೈಹಿಡಿದು ಸಂತಯಿಸುವನಲ್ಲ! ಕೋಪವನ್ನು ಬಿಟ್ಟು ಪ್ರಸನ್ನಳಾಗು.

ಸಾಗ—(ಹುಬ್ಬುಗಂಟುಹಾಕಿಕೊಂಡು) ಸಖಿ! ಸುಸಂಗತೆ! ಇನ್ನಾದರೂ ನೀನು ನಿನ್ನ ಬುದ್ಧಿಯನ್ನು ಬಿಡೆಯಾ?

ವಿದೂ—ಸರಿಸರಿ, ಇವಳು ಎರಡನೆಯ ವಾಸವದತ್ತಾದೇವಿಯೇ.

(ರಾಜನು ಭಯದಿಂದ ಸಾಗರಿಕೆಯ ಕೈಯ್ಯನ್ನು ಬಿಡುವನು)

ಸಾಗ—(ಭಯದಿಂದ) ಸಖಿ! ಸುಸಂಗತೆ! ಈಗ ಏನುಮಾಡಲಿ?

ಸುಸಂ—ಈ ತಮಾಲವೃಕ್ಷದ ಮರೆಗೆ ಹೋಗೋಣ. (ಇಬ್ಬರೂ ಹೋಗುವರು)

ರಾಜ—(ಸುತ್ತಲೂ ನೋಡಿ) ವಸಂತಕನೆ! ವಾಸವದತ್ತೆಯೆಂದು ಹೇಳಿದೆಯಲ್ಲ! ಎಲ್ಲಿ?

ವಿದೂ—ಮಿತ್ರನೆ! ಸಾಗರಿಕೆಯ ದೀರ್ಘಕೋಪವನ್ನು ನೋಡಿ ಅವಳನ್ನೇ ವಾಸವದತ್ತೆಯೆಂದು ಹೇಳಿದೆನೇ ಹೊರತು ಮತ್ತೆಬೇರೆಇಲ್ಲ. (ಸಂಜ್ಞೆಮಾಡುವನು)

ರಾಜ—ತೆಗೆ ಮೂರ್ಖನೆ!

ರಾಗ ‖ ತಾಳ ‖

ಏಗೈದೆಯೋ ಮೂರ್ಖತೆಗೆತೆಗೆ । ನೀನೀಗಳಕ್ಕಟ ‖ ಪ ‖
ನಾಗವೇಣಿಯನು । ರಾಗದಿಂವರಿಸುವನಿತರೊಳು ‖ ಅ ‖
ಅನುರಾಗರಂಜಿತೆಯಾಗಿಹ । ವನಜಾಯತಾಕ್ಷಿಯು ತೋಳ್ಗಳ ।
ಘನತೋಷದಿಂತಕ್ಕವಿಪೆನ್ನರತ್ನಾವಳಿಯಂತಿರೆ ‖ ೧ ‖

ಕಂದ ‖ ಸುಲಲಿತರಾಗದೆ ರತ್ನಾ
ವಳಿಯಂತಿರೆ ಮೆರೆವಕಾಂತೆ ಸಿಲ್ಕಿರಲವಳಂ ‖

ಬಲುಹಿಂದೆನ್ನಯ ಕಂಠ
ಸ್ಥಲದೊಳ್ ಸಂಗಡಿಸುವನ್ನೆಗಂ ತೊಲಗಿಸಿದ್ಯೆ ॥

(ವಾಸವದತ್ತೆಯು ಕಾಂಚನಮಾಲೆಯೊಡನೆ ಪ್ರವೇಶಿಸಿ)

ವಾಸವದತ್ತೆ—ಸಖಿ, ಕಾಂಚನಮಾಲೆ! ಆರ್ಯಪುತ್ರನು ಪರಿಗ್ರಹಿಸಿರುವ ನವಮಾಲಿಕಾಲತೆಯು ಇನ್ನೆಷ್ಟು ದೂರವಿರುವುದು?

ಕಾಂಚನಮಾಲಾ—ಅದೊ, ಕದಳೀಮಂಟಪದ ಆಚೆಯಿರುವುದು.

ವಾಸವ—ನಡೆ, ಅಲ್ಲಿಗೆ ಹೋಗೋಣ. (ಮುಂದೆ ಬರುವರು).

ರಾಜ—ಮಿತ್ರನೇ! ನನ್ನ ಪ್ರಿಯೆಯನ್ನು ಇನ್ನೆಲ್ಲಿ ನೋಡಬಹುದು?

ಕಾಂಚನ—ದೇವಿಯೇ! ಮಹಾರಾಜನು ಸಮೀಪದಲ್ಲಿಯೇ ಮಾತನಾಡುವ ಹಾಗಿದೆ. ಆದುದರಿಂದ ನಿನ್ನ ಬರುವಿಕೆಯನ್ನೇ ಹಾರಯಿಸಿಕೊಂಡು ನಿನ್ನ ವಿಷಯವಾಗಿಯೇ ಮಾತನಾಡುತ್ತಿರಬಹುದೆಂದು ಎಣಿಸುವೆನು; ನಡೆ, ಅಲ್ಲಿಗೆ ಹೋಗೋಣ.

ವಾಸವ—(ರಾಜನ ಸಮೀಪಕ್ಕೆ ಬಂದು) ಆರ್ಯಪುತ್ರನೇ! ನಿನಗೆ ವಿಜಯವಾಗಲಿ.

ರಾಜ—(ವಿದೂಷಕನನ್ನು ಕುರಿತು ಗುಟ್ಟಾಗಿ) ಚಿತ್ರಪಟವನ್ನು ಮುಚ್ಚು ಮುಚ್ಚು.

ವಿದೂ—ಅಪ್ಪಣೆ (ಮುಚ್ಚುವನು)

ವಾಸವ—ಆರ್ಯಪುತ್ರನೇ! ನಿಮ್ಮ ನವಮಾಲಿಕಾಲತೆಯು ಪುಷ್ಪಿಸಿತೋ?

ರಾಜ—(ಆಶ್ಚರ್ಯದಿಂದ) ದೇವಿ! ನಾನು ಮುಂದೆ ಬಂದಿದ್ದರೂ, ನೀನು ಬರುವುದು ಸಾವಕಾಶವಾದುದರಿಂದ, ನಿನ್ನೊಡನೆಯೇ ನೋಡೋಣವೆಂದು ನೋಡಲಿಲ್ಲ; ಬಾ, ಹೋಗಿ ನೋಡೋಣ.

ವಾಸ—ಆರ್ಯಪುತ್ರನೇ! ನಿನ್ನ ಮುಖವಿಲಾಸದಿಂದಲೇ ನವಮಾಲಿಕಾಲತೆಯು ಪುಷ್ಪಿಸಿರುವಂತೆ ತೋರುತ್ತದೆ; ಅಲ್ಲಿಗೆ ಇನ್ನೇತಕ್ಕೆ ಬರಲಿ, ಹಿಂತಿರಿಗಿ ಹೋಗುವೆನು.

ವಿದೂ—ಈಗಲೀಗ ನಾವು ಗೆದ್ದೆವು.

॥ ರಾಗ ॥

ಬದುಕಿದೆವ್ಯೈ ಬದುಕಿದೆವ್ಯೈ । ಒದಗೆ
ನಿಜಾರ್ಥ । ಉದಯದಿ ನಾವೆದ್ದಪುಳಿಗೆ ।
ಯಿಂದು ಸುಮುಹೂರ್ತ ॥ ೧ ॥

(ಕುಣಿದಾಡುವನು, ಚಿತ್ರಪಟ ಕೆಳಕ್ಕೆ ಬೀಳುವುದು)

ರಾಜ—(ಅದನ್ನು ನೋಡಿ ಭೀತನಾಗಿ ವಿದೂಷಕನನ್ನು ಕೋಪದಿಂದ ನೋಡಿ, ಸನ್ನೆಯಿಂದ ಪಟವನ್ನು ತೋರಿಸುವನು)

ವಿದೂ—(ಮರೆಯಲ್ಲಿ) ಮಿತ್ರನೇ! ಕೋಪಿಸಬೇಡ; ಇದನ್ನು ನಾನು ತಪ್ಪಿಸಬಲ್ಲೆನು.

ಕಾಂಚನ—(ಚಿತ್ರಪಟವನ್ನು ತೆಗೆದುಕೊಂಡು,) ರಾಣಿಯೇ! ನೋಡು ನೋಡು; ಇದರಲ್ಲೇನೋ ಬರೆದಿರುವುದು.

ವಾಸವ—(ನೋಡಿ) ತಿಳಿಯಿತು, ಈತನು ಆರ್ಯಪುತ್ರನು, ಈಕೆ ಸಾಗರಿಕೆ.

ಕಾಂಚನ—ನನಗೂ ಹಾಗೆಯೇ ತೋರುವುದು.

ವಾಸವ—ಆರ್ಯಪುತ್ರನೇ! ಈ ಚಿತ್ರಪಟದ ಸಂಗತಿಯೇನು?

ರಾಜ—(ತಲೆ ತಗ್ಗಿಸಿ ನಕ್ಕು, ವಿದೂಷಕನನ್ನು ಕುರಿತು ಮರೆಯಲ್ಲಿ) ಎಲೈ ಮಿತ್ರನೇ! ಇದಕ್ಕೇನುತ್ತರ?

ವಿದೂ—(ಮರೆಯಲ್ಲಿ) ಮಹಾರಾಜನೇ! ಯೋಚಿಸಬೇಡ, ಸುಮ್ಮನಿರು. ನಾನೇ ಉತ್ತರ ಹೇಳುವೆನು. (ಪ್ರಕಾಶ) ಪೂಜ್ಯಳೇ! ನೀನು ಬೇರೆ ಯೋಚಿಸಕೂಡದು. ತನ್ನ ಭಾವವನ್ನು ತಾನೇ ಬರೆಯುತಕ್ಕದು ಅಸಾಧ್ಯವೆಂದು ನಾನು ಹೇಳಿದುದಕ್ಕೆ ಮಹಾರಾಜನು ತನ್ನ ಆಕೃತಿಯನ್ನು ತಾನೇ ಬರೆದನು.

ವಾಸವ—ಇದು ವಸಂತಕನ ಚಾತುರ್ಯದ ಬಲ್ಮೆ.

ರಾಜ—ವಸಂತಕ ಹೇಳಿದುದೇ ನಿಜ.

ವಾಸವ—ಅದು ಹಾಗಿರಲಿ, ನಿನ್ನ ಮಗ್ಗುಲಲ್ಲಿ ಬರೆಯಲ್ಪಟ್ಟಿರುವ ಇವಳು ಯಾರು? ಇದಕ್ಕೂ ವಸಂತಕನ ಚಾತುರ್ಯವೇ ಬೇಕೋ?

ರಾಜ—(ತಲೆಬಾಗಿಸಿ) ದೇವಿ! ಬೇರೆ ಎಣಿಸಬೇಡ, ಈ ಸ್ತ್ರೀಯನ್ನು

ಮನಸ್ಸಿಗೆ ತೋರಿದಂತೆ ಬರೆದುದೇ ಹೊರತು ಇವಳನ್ನು ನಾನು ಎಲ್ಲಿಯೂ ಕಂಡುದಿಲ್ಲ.

ವಿದೂ—ದೇವೀ ! ನಿಜ, ನನ್ನ ಯಜ್ಞೋಪವೀತದಾಣೆಗೂ ನಿಜ. ಇಂತಹ ರೂಪಾತಿಶಯವುಳ್ಳವಳನ್ನು ನಾನೆಲ್ಲಿಯೂ ಕಂಡಿಲ್ಲ.

ಕಾಂಚ—ಎಲಾ ದೇವಿಯೇ ! ಘುಣಾಕ್ಷರನ್ಯಾಯದಿಂದಲೂ, ಹೀಗಾಗುವುದುಂಟು, ಆದುದರಿಂದ ಕೋಪಿಸಬೇಡ.

ವಾಸ—(ಮರೆಯಲ್ಲಿ) ಎಲೆ ಮುಗ್ಧೆ ! ಇವನಾರು, ವಸಂತಕನಲ್ಲವೇ ? ಇವನ ವಕ್ರೋಕ್ತಿಯನ್ನು ನೀನೇನು ಬಲ್ಲೆ ! ಸುಮ್ಮನಿರು. (ಪ್ರಕಾಶಂ) ಆರ್ಯಪುತ್ರನೇ ! ಈ ಚಿತ್ರವನ್ನು ನೋಡಿದಾರಭ್ಯ ನನಗೇನೋ ತಲೆನೋವು ತಲೆದೋರಿರುವುದು ; ನಾನು ಹೊರಡುವೆನು. (ಹೊರಡುವಳು).

ರಾಜ—(ತಡೆದು, ದೇವಿಯ ಸೆರಗನ್ನು ಹಿಡಿದು)

ರಾಗ ॥ ಭೈರವಿ ॥

ನೀರೆ ಪೇಳೆಂತು ತಿಳಿಪುವೆನು । ನಾನೀಗ ॥ ಪ ॥
ನೀರೇಜಪತ್ರಾಕ್ಷೀ ಮಾರಿರ್ಪ ಕೋಪವ ॥ ಅ ॥
ಮುನಿಸನು ಮಾಣ್ಬು । ದೆನಲೆನ್ನಲ್ಲಿಲ್ಲದ ।
ಮುನಿಸನಾರೋಪಿಸಿ । ದನುವಪ್ಪು
ದೇ ಗೈವೆನಾನೀಗ ॥ ೧ ॥
ಮುಂದಿದಗೈಯ್ಯೆ । ನೆಂದೊಡೆ ನಾನು
ಹಿಂದೆಗೈದುದನೊಪ್ಪಿ । ದಂದದೊಳ
ಪ್ಪುದು ನಾನೀಗ ॥ ೨ ॥
ವಲ್ಲಭದೋಷಿ । ಯಲ್ಲನಾ ನೆನ್ನೆ !
ಸುಳ್ಳನು ನಿನ್ನೊಳು । ಸೊಲ್ಲಿಸಿದಂ
ತಪ್ಪುದಾನೀಗ ॥ ೩ ॥

ವಾಸ—(ಮೆಲ್ಲನೆ ಸೆರಗನ್ನು ಬಿಡಿಸಿಕೊಂಡು) ಆರ್ಯಪುತ್ರನೇ ! ನನ್ನಲ್ಲಿ ಬೇರೆ ಸಂದೇಹಪಡಬೇಡ, ನಿಜವಾಗಿ ನನಗೆ ತಲೆನೋವು ಪೀಡಿಸುವುದು, ಆದುದರಿಂದ ಹೋಗುವೆನು. (ಕಾಂಚನಮಾಲೆಯೊಡನೆ ಹೋಗುವಳು).

ವಿದೂ—ಮಿತ್ರನೇ! ನಮಗೆ ಬಂದ ಅಕಾಲಮೃತ್ಯು ದೈವಯೋಗದಿಂದ ತೊಲಗಿಹೋಯಿತು; ದೇವಿಯು ಕೋಪಿಸಿಕೊಳ್ಳದೆ ಸಂತೋಷದಿಂದಲೇ ಹೋದಳು.

ರಾಜ—ಎಲೈ ಮೂರ್ಖನೆ! ದೇವಿಯು ಸುಮ್ಮನೆ ಹೋದಳೆಂದು ಸಂತೋಷಿಸಲಾಗದು. ಏಕೆಂದರೆ, ಸತ್ಕುಲಪ್ರಸೂತೆಯಾದುದರಿಂದ, ತನ್ನ ಕೋಪವನ್ನು ಪ್ರಕಾಶಪಡಿಸಲಿಲ್ಲ, ಕೇಳು.

ಕಂದ ॥ ಬಿಗುಪಿಂದೆ ಪುರ್ಬುಗಂಟಿಡೆ
ಮೊಗಮಂ ಬಾಗಿಸಿದಳೊಂದುಮಂ ಬಿರುನುಡಿಯಂ ॥
ವಿಗೆನುಡಿದಳಲ್ತು ಮುಳಿದುಂ
ಮೃಗಲೋಚನೆ ಬಿಟ್ಟುದಿಲ್ಲ ತನ್ನಯ ನಯಮಂ ॥

(ಎಂದು ತೆರಳುವಳು)

ಎರಡನೆಯಂಕಂ ಸಂಪೂರ್ಣಂ.



## ಮೂರನೆಯಂಕಂ

ಮದನಿಕೆ—(ಪ್ರವೇಶಿಸಿ ಆಕಾಶವನ್ನು ನೋಡಿ,) ಎಲೆ ಕೌಶಾಂಬಿಕೆ! ಮಹಾರಾಜನ ಸಮೀಪದಲ್ಲಿ ಕಾಂಚನಮಾಲೆಯನ್ನು ಕಂಡೆಯೋ? (ಕಿವಿಗೊಟ್ಟು ಕೇಳಿ) ಏನು ಹೇಳಿದೆ? ಅವಳು ಆಗಲೇ ಬಂದು ಹೋದಳೆಂದೊ? ಹಾಗಾದರೆ ಅವಳನ್ನೆಲ್ಲಿ ಕಾಣಬಹುದು? (ಮುಂದೆ ನೋಡಿ) ಇದೋ, ಕಾಂಚನಮಾಲೆಯು ಈಕಡೆಯೇ ಬರುವಳು; ಅವಳ ಸಮೀಪಕ್ಕೆ ಹೋಗುವೆನು (ಎಂದು ಮುಂದೆ ಬರುವಳು).

ಕಾಂಚನಮಾಲೆ—(ಪ್ರವೇಶಿಸಿ ನಿಟ್ಟುಸಿರು ಬಿಟ್ಟು ಸ್ವಗತ) ಭಾಪು! ವಸಂತಕನೇ, ಭಾಪು!; ಸಂಧಾನಚಮತ್ಕಾರದಿಂದ ಅಮಾತ್ಯಯೌಗಂಧರಾಯಣನನ್ನೂ ತಿರಸ್ಕರಿಸಿದೆ.

ಮದ—ಸಖಿ! ಕಾಂಚನಮಾಲೆ! ಅದೇನು ವಸಂತಕನು ಮಾಡಿದುದು? ಅವನನ್ನು ಏತಕ್ಕೆ ಇಷ್ಟು ಕೊಂಡಾಡುವೆ?

ಕಾಂಚ— ಸಖಿ! ಇದರಿಂದ ನಿನಗೇನು ಪ್ರಯೋಜನ; ಇದನ್ನು ಕೇಳಬೇಡ. ಹೇಳಿದ ರಹಸ್ಯವನ್ನು ನೀನು ಕಾಪಾಡತಕ್ಕವಳಲ್ಲ.

ಮದ—ದೇವಿಯಾಣೆಗೂ ಯಾರಿಗೂ ಹೇಳುವುದಿಲ್ಲ, ಅದೇನು ಹೇಳು.

ಕಾಂಚ—ಹಾಗಾದರೆ ಕೇಳು, ಅರಮನೆಯಿಂದ ನಾನು ಬರುತ್ತಿರುವಾಗ ಚಿತ್ರಶಾಲೆಯ ಬಾಗಿಲಲ್ಲಿ ವಸಂತಕನೂ ಸುಸಂಗತೆಯೂ ಒಬ್ಬರಿಗೊಬ್ಬರು ಮಾತಾಡಿಕೊಳ್ಳುತ್ತಿದ್ದರು.

ಮದ—ಅದೇನು?

ಕಾಂಚನ—ವಸಂತಕನು, ಹೀಗೆ ನುಡಿಯುತ್ತಿದ್ದನು, "ಎಲೆ ಸುಸಂಗತೆ! ನಮ್ಮ ಮಹಾರಾಜನ ಅಸ್ವಸ್ಥತೆಗೆ ಸಾಗರಿಕೆಯನ್ನು ಬಿಟ್ಟು ಬೇರೆ ಕಾರಣವಿಲ್ಲ. ಅದಕ್ಕೆ ಪ್ರತೀಕಾರವನ್ನು ಯೋಚಿಸಬೇಕು." ಎಂದು.

ಮದ—(ಯೋಚಿಸಿ) ಅದಕ್ಕೆ ಸುಸಂಗತೆ ಏನು ಹೇಳಿದಳು?

ಕಾಂಚನ—ಚಿತ್ರಪಟದ ವೃತ್ತಾಂತದಿಂದ ಅನುಮಾನಪಟ್ಟಿರುವ ದೇವಿಯು, ಸಾಗರಿಕೆಯನ್ನು ಎಚ್ಚರಿಕೆಯಿಂದ ನೋಡಿಕೊಳ್ಳೆಂದು ನನ್ನ

ವಶಕ್ಕೆ ಕೊಟ್ಟು, ತಾನು ಕೊಟ್ಟಿದ್ದ ಆಭರಣಗಳನ್ನು ನನಗೊಲಿದು ಕೊಟ್ಟಿರುವಳು. ಆದುದರಿಂದ ಆ ಆಭರಣಗಳಿಂದಲೇ ಸಾಗರಿಕೆಗೆ, ದೇವಿಯ ವೇಷವನ್ನು ಹಾಕಿ, ನಾನು ಕಾಂಚನಮಾಲೆಯ ವೇಷವನ್ನು ಧರಿಸಿಕೊಂಡು, ಸಂಜೆಯ ಮಬ್ಬಿನಲ್ಲಿ ಮಹಾರಾಜನ ಸಮೀಪಕ್ಕೆ ಅವಳನ್ನು ಕರೆತರುವೆನು. ಆವರೆಗೂ ಇಲ್ಲಿಯೇ ಕಾದಿರು. ಆ ಬಳಿಕ ಈ ಮಾಧವೀ ಮಂಟಪದಲ್ಲಿಯೇ ಸಾಗರಿಕೆಗೂ ಮಹಾರಾಜನಿಗೂ ಸಮಾಗಮವನ್ನು ಆಗಮಾಡೋಣ.

ಮದ—ಎಲೆ ಸುಸಂಗತೆ! ನೀನೆಂತಹ ನೀಚಳು? ನಿನ್ನಲ್ಲಿ ಅಷ್ಟು ನಂಬುಗೆಯಿಟ್ಟಿರುವ ದೇವಿಯನ್ನು ಹೀಗೆ ವಂಚಿಸುವೆಯಲ್ಲ!

ಕಾಂಚನ—ಎಲೆ ಮದನಿಕೆ! ನೀನೆಲ್ಲಿ ಹೋಗುತ್ತಿದ್ದೆ?

ಮದನಿ—ಮಹಾರಾಜನ ಅಸ್ವಸ್ಥತೆಗೆ ಕಾರಣವೇನೆಂದು ತಿಳಿದು ಬರಲು ಕಳುಹಿಸಿದ ಕಾಂಚನಮಾಲೆಯು ಇನ್ನೂ ಬರಲಿಲ್ಲ, ನೋಡು, ಹೋಗೆಂದು ದೇವಿಯು ನನ್ನನ್ನು ಕಳುಹಿಸಿದಳು; ಆದುದರಿಂದ ಬಂದೆನು.

ಕಾಂಚನ—ಅಯ್ಯೋ! ದೇವಿಯು ಕಪಟವೇಷವನ್ನು ಮನಸ್ಸಿನಲ್ಲೂ ಕಂಡವಳಲ್ಲ' ಬೆಳ್ಳಗಿರುವುದನ್ನೆಲ್ಲಾ ಹಾಲೆಂದು ಯೋಚಿಸುವಳು; ಮಹಾರಾಜನಾದರೆ ಅನಾರೋಗ್ಯವೆಂಬ ನೆಪದಿಂದ ತನ್ನ ಮನ್ಮಥಾವಸ್ಥೆಯನ್ನು ಮರೆಮಾಚಿಕೊಂಡು ದಂತದ ತೋಟ್ಟಿಯ ಮೊಗಸಾಲೆಯಲ್ಲಿರುವನು. ಈ ವೃತ್ತಾಂತವನ್ನು ದೇವಿಗೆ ತಿಳಿಸೋಣ, ನಡೆ.

(ಎಂದಿಬ್ಬರೂ ಹೋಗುವರು)

## ದಂತದ ತೋಟ್ಟ

ರಾಜ—(ಮದನಾವಸ್ಥೆಯನ್ನಭಿನಯಿಸುತ್ತಾ)

ಕಂದ ॥ ಎಲೆಹೃದಯವೆ ಮದನಶರಾ ।
ನಲತಾಪಮನಕಟ ಸೈರಿಸಾ ಸುದತಿಯ ಶೀ ॥
ತಲಕರಮಂ ಪಿಡಿದುಂ ಸಂ ।
ಗಳಿಸದೆ ನಿನ್ನಲ್ಲಿ ಮರೆದೆನೇನಜ್ಞನೊ! ನಾಂ ॥

ರಾಗ ॥ ತಾಳ ॥

ವಿರಹಾನಲನುರಿಯುನಾಂತು । ಧರಿಪೆಂ ಪ್ರಾಣವನಿನ್ನೆಂತು ॥
ಬರಿದೇಮುಳಿಸಂ ತಳೆದಿಂತು । ಪರಿತಾಪವಗೈವರೆ ಕಂತು ॥ ಪ ॥
ಅಂಗಗಳಿಲ್ಲದೆ । ಕಂಗೆಡಿಪೈ ಲೋ । ಕಂಗಳನೆಲ್ಲವನೀಕ್ಷಿಸೆ ನಿನಗೆ ।
ಅಂಗಗಳಿರಲು ಜ । ಗಂಗಳು ನಿಲುವುವೆ । ಭಂಗವನೊಂದದೆ ।
ಅಂಗಜನೇನಿ । ನ್ನಂಗವಣೆಯುನಾ । ರಿಂಗಮರಿಯಲರಿ । ದೇಂ
ಗತಿಯ್ಕೆ ನಾನಿನ್ನೇವೆ ॥೧॥
ಸಾರಶಿಲೀಮುಖ । ವಾರವ ಬೀರಿ । ನೀರಸಗೆಯ್ವ । ಶರೀರವಮಾರಿ ।
ಸೈರಿಸದಲೆ ನಿಜ । ನಾರಿಯ ಹೃದಯುವ । ಸೇರುತಸತತಂ । ಶೌರಿ
ಯು ಮಸಣದೆ । ಗೌರಿಯ ಧವಸಂ । ಚಾರವನೆಸಗುವ ।
ನಾರಿದಿರ್ಕೈ ನಿನಗೈಗೋಲ ॥ ೨ ॥

(ಯೋಚಿಸಿ) ಆದರೆ ನನಗಾಗಿ ನಾನು ಚಿಂತಿಸುವುದಿಲ್ಲ ; ದೇವಿಯ ವಶಕ್ಕೆ ಸಿಕ್ಕಿ ಕೋಟಲೆಗೊಳ್ಳುವ ಸಾಗರಿಕೆಯ ಅವಸ್ಥೆಯನ್ನು ಸ್ಮರಿಸಿಕೊಂಡು ವಿಶೇಷವಾಗಿ ಚಿಂತಿಸುವೆನು.

ಕಂದ ॥ ತಿಳಿಗುಂ ಜನಕೆನ್ನಿರವೆಂ
ದಳುಕುವಳಾಲೀಜನಂಗಳೀಕ್ಷಿಸೆ ಲಜ್ಜಾ ॥
ಕುಲೆ ತಲೆವಾಗಿಪಳೀಪರಿ
ಕಳವಳವಃಂ ತಾಳ್ದಿದೆಂತಳಲ್ವಳೊಕಾಣೆಂ ॥

ಆದರೆ ಅವಳ ಸಮಾಚಾರವನ್ನು ತಿಳಿದುಬರುವುದಕ್ಕೆ ಹೋದ ವಸಂತಕನು ಏಕಿಷ್ಟು ತಡಮಾಡಿದನೊ ?

(ವಿದೂಷಕನ ಪ್ರವೇಶ)

ವಿದೂ—(ಸ್ವಗತ) ಆಃ ! ಈಗ ನಾನು ಮಹಾರಾಜನಿಗೆ ಹೇಳುವ ನುಡಿಯಿಂದ ಉಂಟಾಗುವ ಸಂತೋಷವು, ಈ ಕೌಶಾಂಬೀರಾಜ್ಯಕ್ಕೆ ಪಟ್ಟಕಟ್ಟಿದಾಗಲೂ ಆತನಿಗೆ ಉಂಟಾಗಲಿಲ್ಲವೆಂದು ನಿಜವಾಗಿ ಎಣಿಸುವೆನು. ಇದೊ, ಮಹಾರಾಜನು ನನ್ನ ಬರುವಿಕೆಯನ್ನೇ ಹಾರೈಸುತ್ತ ಅಭಿಮುಖನಾಗಿ ನಿಂತಿರುವನು. (ಸಮೀಪಕ್ಕೆ ಬಂದು) ಎಲೈ ಮಹಾರಾಜನೆ ! ದೈವಯೋಗದಿಂದ ನಿನ್ನ ಇಷ್ಟವು ಸಿದ್ಧಿಸಿತು.

ರಾಜ—ಎಲೈ ಮಿತ್ರನೆ! ನನ್ನ ಪ್ರಿಯೆಯಾದ ಸಾಗರಿಕೆಯು ಕುಶಲವೆ?

ವಿದೂ—ಸ್ವಲ್ಪಹೊತ್ತಿಗೆ ಅವಳನ್ನು ನೀನೇ ತಕ್ಕಯಿಸಿ, ಕುಶಲವನ್ನು ಬೆಸಗೊಳ್ಳುವೆ. ತಾಳು.

ರಾಜ—(ಸಂತೋಷದಿಂದ) ಏನು! ಸಾಗರಿಕೆಯ ಸಂದರ್ಶನವು ನನಗೆ ಸಂಭವಿಸುವುದೆ?

ವಿದೂ—ಬೃಹಸ್ಪತಿಯ ಬುದ್ಧಿಯನ್ನೂ ಹಾಸ್ಯಮಾಡುವ ನಾನು ನಿನಗೆ ನರ್ಮಸಚಿವನಾಗಿರುವಾಗ ಯಾವುದುತಾನೇ ಆಗದೆ ಇದ್ದೀತು?

ರಾಜ—ಅದಕ್ಕೆ ಸಂದೇಹವೇನು? ಆದರೆ ಏನುಮಾಡಿಬಂದೆ? ಹೇಳು.

ವಿದೂ—(ಕಿವಿಯಲ್ಲಿ ಹೇಳುವನು)

ರಾಜ—ಭಾಪು ಮಿತ್ರನೆ ಭಾಪು! (ಕೈಕಡಗವನ್ನು ತೆಗೆದುಕೊಡುವನು)

ವಿದೂ—(ಕಡಗವನ್ನು ಕೈಗಿಟ್ಟುಕೊಂಡು) ಮಿತ್ರನೇ! ರತ್ನಖಚಿತವಾದ ಕನಕಕಂಕಣದಿಂದ ಅಲಂಕೃತವಾಗಿರುವ ಈ ಹಸ್ತವನ್ನು ಮನೆಗೆಹೋಗಿ ನನ್ನ ಮಡದಿಗೆ ತೋರಿಸುವೆನು.

ರಾಜ—ಆಮೇಲೆ ತೋರಿಸು. ಮಿತ್ರನೆ! ಸಾಯಂಕಾಲಕ್ಕೆ ಇನ್ನೆಷ್ಟುಹೊತ್ತುಳಿದಿರುವುದು?

ವಿದೂ—(ನೋಡಿ) ಮಿತ್ರನೆ! ಇದೇನು? ನೀನು ನೋಡಲಿಲ್ಲವೇ? ಇದೊ, ನೋಡು, ಸೂರ್ಯನು ಅನುರಾಗದಿಂದ ಕೂಡಿ ಸಂಧ್ಯಾಂಗನೆಯೊಳು ಸಂಕೇತವನ್ನು ಪಡೆದು ಅಸ್ತಾದ್ರಿಯ ಗವಿಯಲ್ಲಿ ದೂರುತ್ತಿರುವನು.

ರಾಜ—(ನೋಡಿ) ಇದೊ, ಹಗಲು ಕಳೆಯಿತು.

ಕಂದ ‖ ಎಲೆಕಮಲಿನಿ ಮರುಗದಿರಾಂ
ನಲವಡಿಪೆಂ ಮತ್ತಮೈದುತಾನೆಂದಸ್ತಾ ‖
ಚಲದ ತಲೆಮುಟ್ಟಿ ನಂಬಿಪ
ವೊಲೆ ಮೆರೆವಂ ತದ್ಗತಾತ್ಮಕರನಹಿಮಕರಂ ‖

ಆದುದರಿಂದ ನಾವು ಮಾಧವೀಮಂಟಪವನ್ನು ಹೊಕ್ಕು ಪ್ರಿಯೆ ಬರುವು ದನ್ನು ಹಾರಯಿಸಿಕೊಂಡಿರೋಣ, ನಡೆ. (ಇಬ್ಬರೂ ಹೋಗುವರು)

(ಮಾಧವೀ ಮಂಟಪ)

ವಿದೂ—ಮಿತ್ರನೇ! ನೋಡು, ಕಾರ್ಮುಗಿಲಂತೆ ಕವಿದ ಕತ್ತಲೆ ಯಿಂದ ದಾರಿಯೇ ಕಾಣದಿರುವುದು: ಹೇಗೆ ಹೋಗೋಣ?

ರಾಜ—ಈ ಉದ್ಯಾನದಲ್ಲಿರುವ ಹೂಗಿಡದ ಪರಿಮಳದ ಗುರುತಿ ನಿಂದಲೇ ಮಾರ್ಗವು ತಿಳಿಯಬರುವುದು. (ಪುಷ್ಪಗಂಧವನ್ನಾಘ್ರಾಣಿ ಸುತ್ತಾ ಮುಂದೆ ಬರುವರು)

ವಿದೂ—ಮಿತ್ರನೆ! ಈ ಪ್ರದೇಶವು ಕುಸುಮಪರಾಗಪರಿಮಳ ದಿಂದ ಘಮಘಮಿಸುತ್ತಾ ಮರಕತಶಿಲೆಗಳಿಂದ ನಮ್ಮ ಹೆಜ್ಜೆಗೆ ತಂಪು ಮಾಡುತ್ತಿರುವ ಕಾರಣ ಇದೇ ಮಾಧವೀ ಮಂಟಪವೆಂದು ತಿಳಿಯ ಬರುವುದು. ಇಲ್ಲಿ ಸ್ವಲ್ಪಹೊತ್ತು ಕುಳಿತುಕೊ. ದೇವಿಯ ವೇಷವನ್ನು ಹಾಕಿರುವ ಸಾಗರಿಕೆಯನ್ನು ನಾನು ಕರೆತರುವೆನು.

ರಾಜ—ಬೇಗ ಬೇಗ.

ವಿದೂ—ಬೇಗುದಿಪಡಬೇಡ. ಬೇಗಬರುವೆನು. (ಎಂದು ಹೋಗು ವನು)

ರಾಜ—ಅದುವರೆಗೂ ಈ ಪಚ್ಚೆಯ ಜಗುಲಿಯಮೇಲೆ ಕುಳಿತು ಪ್ರಿಯಳ ಬರುವಿಕೆಯನ್ನು ಹಾರೈಸುತ್ತಿರುವೆನು. (ಎಂದು ಕುಳಿತು ಕೊಂಡು) ಆಃ! ಕಾಮಿಗಳಿಗೆ ಸ್ವಸ್ತ್ರೀ ಎಂದರೆ ಅನಾದರ, ನೂತನಸ್ತ್ರೀ ಎಂದರೆ ಅತ್ಯಾದರ, ಇದಲ್ಲವೆ ಆಶ್ಚರ್ಯ! ಹಾಗೆಯೇ ಸರಿ.

ಕಂದ ॥ ಅನುರಾಗಮಿರ್ದುಂ ನೋಡಳ್
ಮನಮಿರ್ದುಂ ಕೊರಳನಪ್ಪಿ ತಕ್ಕಯಿಸಳ್ ಕೈ ॥
ಗನುಗೊಂಡಿರ್ದುಂ ಮಾಣ್ಮಾ
ಣೆನುವಳ್ ಪೊಸಗನ್ನೆಯಾದೊಡಂ ನಲವಡಿಪಳ್ ॥

ಇಷ್ಟುಹೊತ್ತಾದರೂ ವಸಂತಕನು ಏತಕ್ಕೆ ಬರಲಿಲ್ಲ, ಒಂದುವೇಳೆ ಈ ವೃತ್ತಾಂತವು ದೇವಿಗೇನಾದರೂ ತಿಳಿಯಬಂದಿತೊ?

(ವಾಸವದತ್ತಾ ಕಾಂಚನಮಾಲೆಯರ ಪ್ರವೇಶ)

ವಾಸವದತ್ತೆ—ಸಖಿ ! ಕಾಂಚನಮಾಲೆ ! ಸಾಗರಿಕೆಯು ನನ್ನ ವೇಷದಿಂದ ಮಹಾರಾಜನನ್ನು ಹೊಂದುವಳೆಂಬ ಸುದ್ದಿ ನಿಜವೆ ?

ಕಾಂಚನಮಾಲೆ—ದೇವಿ, ಅದಕ್ಕೆ ಸಂದೇಹವೆ ? ಇಲ್ಲದೇಯಿದ್ದರೆ ದೇವಿಗೆ ನಾನು ಸುಳ್ಳನ್ನು ಬಿನ್ನಯಿಸುವೆನೇ ? ಇದಕ್ಕೆ ಚಿತ್ರಶಾಲೆಯ ಬಾಗಿಲಲ್ಲಿ ವಸಂತಕನಿರುವುದೇ ಸಾಕ್ಷಿ. ನೋಡು ಬಾ.

ವಾಸವ—ಹಾಗಾದರೆ ಅಲ್ಲಿಗೆ ಹೋಗೋಣ ನಡೆ. (ಇಬ್ಬರೂ ಮುಂದೆ ಬರುವರು)

ವಿದೂ—(ಕಪ್ಪು ಬಟ್ಟೆಯನ್ನು ಮುಸುಕು ಹಾಕಿಕೊಂಡುಬಂದು) ಇದೇನು ? ಚಿತ್ರಶಾಲೆಯ ಬಾಗಿಲಲ್ಲಿ ಹೆಜ್ಜೆಯ ಸದ್ದು ಕೇಳಿಸುತ್ತಿದೆ ? ಸಾಗರಿಕೆ ಏನಾದರೂ ಬಂದಳೋ ?

ಕಾಂಚನ—ದೇವಿ ! ವಸಂತಕನನ್ನು ಸನ್ನೆಯಿಂದ ಕರೆಯುವೆನು. ನೋಡು (ಎಂದು ಚಿಟಿಕೆ ಹಾಕುವಳು).

ವಿದೂ—(ನೋಡಿ) ಎಲೆ ಸುಸಂಗತೆ ! ನಿನಗೆ ಕಾಂಚನಮಾಲೆಯ ವೇಷವು ಬಹು ಚೆನ್ನಾಗಿ ಒಪ್ಪುವುದು, ಆಯಿತು, ಸಾಗರಿಕೆ ಎಲ್ಲಿ ?

(ಕಾಂಚನಮಾಲೆಯು ಬೆರಳಿನಿಂದ ದೇವಿಯನ್ನು ತೋರಿಸುವಳು)

ವಿದೂ—ಇವಳು ಆ ವಾಸವದತ್ತಾದೇವಿಯೇ !

ವಾಸವ—ಓಹೋ! ಇನ್ನೇನು ಗತಿ. ಇವನು ನನ್ನನ್ನು ತಿಳಿದನೊ ?

ವಿದೂ—(ಚಿಟಿಕೆಹಾಕಿ) ಎಲಾ ಸಾಗರಿಕೆ ! ಇತ್ತ ಬಾ.

(ವಾಸವದತ್ತೆಯು ನಕ್ಕು ಕಾಂಚನಮಾಲೆಯ ಮುಖವನ್ನು ನೋಡುವಳು)

ಕಾಂಚ—(ಮರೆಯಾಗಿ ಬೆರಳು ಸನ್ನೆಯಿಂದ) ಎಲೆ ಕೇಡಿಗನೇ ! ಈ ದುರುಳತನವನ್ನು ಮರೆಯದಿರು, ಕಂಡೆಯಾ ?

ವಿದೂ—ಎಲೆ ಸಾಗರಿಕೆ ! ಬೇಗಬಾ ಬೇಗಬಾ. ಚಂದ್ರಮಂಡಲವು ಉದಯಿಸುವುದು. (ಹೊರಡುವನು)

ರಾಜ—ಪ್ರಿಯಳ ಸಮಾಗಮವು ಸಮೀಪಿಸಿದರೂ ನನ್ನ ಮನಸ್ಸು ವೃಥಾ ಏಕಿಷ್ಟು ಕಳವಳಪಡುವುದು ? ಅಥವಾ ;

ಕಂದ ‖ ಪರಿಕಿಸೆವರ್ಷಾಗಮದೊಳ್
ಪಿರಿದುಂ ಮಳೆಯೊದಗೆ ದಿವಸಮುರುಪುವತೆರದಿಂ ‖
ಸ್ಮರಬಾಧೆ ಮೊದಲೆ ತನ್ನಂ
ಕೊರಗಿಸದಾಸನ್ನಮೆನಿಸೆಕೊರಗಿಪುದಲ್ತೇ ‖

ವಿದೂ—(ಕಿವಿಗೊಟ್ಟು ಕೇಳಿ) ಎಲೆ ಸಾಗರಿಕೆ! ಮಹಾರಾಜನು ನಿನ್ನ ಆಗಮನವನ್ನೇ ಹಾರೈಸಿಕೊಂಡು ಏನೇನೋ ಹಂಬಲಿಸುತ್ತಿರುವನು. ಆದುದರಿಂದ ನಿನ್ನ ಆಗಮನವನ್ನು ಆತನಿಗೆ ತಿಳಿಸುವೆನು.

ದೇವಿ—(ತಲೆಯನ್ನಲ್ಲಾಡಿಸುವಳು)

ವಿದೂ—(ರಾಜನಬಳಿಗೆ ಬಂದು) ಮಿತ್ರನೆ! ಇದೋ! ಸಾಗರಿಕೆಯನ್ನು ಕರೆತಂದಿರುವೆನು.

ರಾಜ—(ಎದ್ದು) ಎಲ್ಲಿ ಎಲ್ಲಿ?

ವಿದೂ—ಅದೋ! ನಿಂತಿರುವಳು.

ರಾಜ—ಪ್ರಿಯೆ, ಸಾಗರಿಕೆ! ಇತ್ತಬಾ. (ಕೈಹಿಡಿದು)

ರಾಗ ‖ ಜಂಜೋಟಿ ‖ ತಾಳ ‖

ಕುಮುದನಯನೆ ಕುಂದರದನೆ।
ಸಮುದಿತವದನೆ। ಶಮಿಪುದೆನ್ನತಾಪ
ಮಿದನೆ। ಹಿಮಕರಾನನೆ ‖ ೧ ‖
ವದನವ ತಗ್ಗಿಸುವೆಯೇಕೆ। ಚದುರೆ
ನಾಚಿಕೆ। ಬೆದರಬೇಡ ಸಾಗರಿಕೆ
ಮದನಶಾರಿಕೆ ‖ ೨ ‖
ತಳುವಗೈಯ್ಯುಲಳಲನಾಂತೆ।
ಚಲದಳಕಾಂತೆ। ಗಳಿಲನೆ ತಕ್ಕವಿಸು
ಕಾಂತೆ। ಬಲುಗುಣವಂತೆ ‖ ೩ ‖

ದೇವಿ—(ಮರೆಯಾಗಿ) ಎಲೆ ಸಖಿ! ಕಾಂಚನಮಾಲೆ! ಮಹಾರಾಜನು ಈಗ ಹೀಗೆ ನುಡಿದು, ಪುನಃ ನನ್ನೊಡನೆ ಹೇಗೆ ಮಾತನಾಡುವನೊ? ಅದುತಾನೆ ಆಶ್ಚರ್ಯ!

ಕಾಂಚ - ದೇವಿಯೆ! ಸಾಹಸಿಕರಾದ ಪುರುಷರು ಏನುತಾನೆ ಮಾಡದಿರುವರು?

ವಿದೂ—ಎಲೆಸಾಗರಿಕೆ ! ಏತಕ್ಕೆ ಲಜ್ಜಿಸುವೆ ? ನಿತ್ಯಕೋಪಿನಿಯಾದ ದೇವಿಯ ನಿಷ್ಠುರೋಕ್ತಿಗಳಿಂದ ಕರಕರಿಸುತ್ತಿರುವ ರಾಯನ ಕಿವಿಗಳನ್ನು ನಿನ್ನ ಸವಿನುಡಿಗಳಿಂದ ಸಂತೋಷಪಡಿಸು.

ವಾಸ—(ಕೋಪದಿಂದ ಕಾಂಚನಮಾಲೆಯಕಡೆಗೆ ತಿರುಗಿ) ಸಖಿ ! ಹೀಗಾಡಿತಾನೆ ವಸಂತಕನು ರಾಯನಿಗೆ ಪ್ರಿಯಮಿತ್ರನಾದುದು.

ಕಾಂಚ—ಒಳ್ಳೆಯದು, ದುಷ್ಟನೇ ! ಈ ಮಾತನ್ನು ಮರೆಯದಿರು.

ವಿದೂ—ಮಿತ್ರನೇ ! ನೋಡು ನೋಡು. ಕೋಪಗೊಂಡ ಕಾಂತೆಯ ಕಪೋಲದಂತೆ ಕೆಂಪಿಡಿದು ಚಂದ್ರನು ಉದಯಿಸುವನು.

ರಾಜ—ಪ್ರಿಯೆ ! ನೋಡು ನೋಡು.

ವೃತ್ತಂ ‖ ಸರಸಿಜಕಾಂತಿಯಂ ಕೆಡಿಸದೇಂ ಮದನಂಗಭಿವೃದ್ಧಿಯೀಯದೇಂ
ವಿರಚಿಸದೇಂ ದೃಗುತ್ಸವಮನಂಗನೆ ನಿನ್ನಮುಖೇಂದು ವಿಂತಿರೊ ‖
ಪ್ಪಿರೆ ಶಶಿಮೇಣದೇಕೆಮರೆವಂ ಸುಧೆಯೆನ್ನೊಳಗಿಪ್ಪುದೆಂಬ ಕೊ
ರ್ವಿರಲದುವುಂ ಮೃಗಾಕ್ಷಿ ಇದೊ ನಿನ್ನಯ ಚೆಂದುಟಿಯಲ್ಲಿ ವರ್ತಿಕುಂ ‖

(ಗಲ್ಲವನ್ನು ಹಿಡಿದೆತ್ತಿ ಬೆಳದಿಂಗಳಿಂದ ಮುಖದ ಗುರುತನ್ನು ತಿಳಿದು ಹೆದರಿ) ಈಕೆ ವಾಸವದತ್ತಾ ದೇವಿ ! ಸಾಗರಿಕೆಯೆಂದು ಮೋಸಹೋದೆನು.

ವಾಸವ—(ಕೋಪದಿಂದ ಮೇಲುಮುಸುಕನ್ನು ತೆಗೆದು) ಆರ್ಯಪುತ್ರನೆ ! ನಿಜ, ನಾನು ಸಾಗರಿಕೆಯೇ, ಸಾಗರಿಕೆಯ ಹುಚ್ಚುಹಿಡಿದಿರುವ ನಿನಗೆ ಎಲ್ಲರೂ ಸಾಗರಿಕೆಯ ಹಾಗೆಯೇ ಕಾಣುವರು.

ರಾಜ—(ಮರೆಯಾಗಿ ವಿದೂಷಕನನ್ನು ಕುರಿತು) ಮಿತ್ರನೆ ! ಏನು ಗತಿ ?

ವಿದೂ—ಇನ್ನು ಗತಿಯೇನು ? ನಮ್ಮ ಪ್ರಾಣಕ್ಕೆ ಬಂತು.

ರಾಜ—(ಕೈಮುಗಿದು) ಪ್ರಿಯೆ, ವಾಸವದತ್ತೆ !

ರಾಗ ‖ ತಾಳ ‖

ಕ್ಷಮಿಸೌ ಕಮಲಾಂಬಕೀ । ರಮಣೀಮಣೀ ‖

ವಿದೂ—(ಸ್ವಗತ) ಈಗ ಏನು ಹೇಳಲಿ ? ಒಳ್ಳೆಯದು. ಹೀಗೆ ಹೇಳುವೆನು. (ಪ್ರಕಾಶ) ದೇವಿ ; ನೀನು ಮಹಾನುಭಾವಳಲ್ಲವೆ ? ರಾಯನ ಇದೊಂದಪರಾಧವನ್ನು ಕ್ಷಮಿಸುವಳಾಗು.

ದೇವಿ—ನಾನು ಕ್ಷಮಿಸುವುದಕ್ಕೆ ಆರ್ಯಪುತ್ರನು ಮಾಡಿದ ಅಪರಾಧ ವೇನು ? ಈತನ ಪ್ರಥಮ ಸಮಾಗಮಕ್ಕೆ ವಿಘ್ನಮಾಡಿದ ನಾನಲ್ಲವೇ ಅಪ ರಾಧಿನಿಯು ?

ರಾಜ—ಮಾಡಿದ ಅಪ್ರಿಯವು ಪ್ರತ್ಯಕ್ಷವಾದಮೇಲೆ ಏನೆಂದು ವಿಜ್ಞಾಪಿಸಲಿ, ಆದರೂ ಹೀಗೆ ವಿಜ್ಞಾಪಿಸುವೆನು.

ಕಂದ ॥ ಮಡದಿಮಣಿ ನಿನ್ನವಕ್ತ್ರದೊ
ಳಿಡಿದೀಕೆಂಪಂ ಸಮಂತು ನಿನ್ನಯ ಕರುಣಂ ॥
ಕಡೆಗಣಿಪುದಾದೊಡಂ ನಿ
ನ್ನಡಿಯಲತಿಗೆಗೆಂಪ ತೊಡೆವೆನೆನ್ನಯ ಮುಡಿಯಿಂ ॥

(ಅಡ್ಡಬೀಳುವನು).

ವಾಸ—(ಹಿಂದೆಗೆದು) ಆರ್ಯಪುತ್ರನೆ ! ಸಾಕು ಸಾಕು, ಏಳುಏಳು. ನಾನೀಗ ನಿರ್ಲಜ್ಜಳು. ನಿನ್ನ ಹೃದಯವಿಂತಹುದೆಂದು ನಿಜವಾಗಿ ತಿಳಿಯು ಲರಿಯದೆ ಕೋಪಿಸಿ ಕೊಂಡೆನು. ಇನ್ನು ನೀನು ಸುಖವಾಗಿರು, ನಾನು ಹೋಗುವೆನು.

ಕಾಂಚ—ದೇವಿ ! ಮಹಾರಾಜನನ್ನು ಸಂತಯಿಸದೆ ದುಡುಕಿ ನಿಂದ ಹೋದನಂತರ, ನೀನು ಬಹಳ ಪಶ್ಚಾತ್ತಾಪಪಡುವೆ ; ಸೈರಿಸಿ ಕೊಂಡು ಮಹಾರಾಜನನ್ನು ಸಂತಯಿಸು.

ವಾಸ—ಬಿಡು ಬಿಡು, ಇನ್ನು ಸಂತಯಿಸುವುದೇನು ? ಸುಮ್ಮನೆ ನಡೆ, (ಹೋಗುವಳು).

ಕಾಂಚ—ನಿನ್ನ ಚಿತ್ತ. (ಎಂದು ಜತೆಯಲ್ಲಿ ಹೋಗುವಳು).

ರಾಜ—(ನಮಸ್ಕರಿಸಿದ್ದಹಾಗೆಯೆ) ದೇವಿ ! ಪ್ರಸನ್ನೆಯಾಗು ಪ್ರಸ ನ್ನೆಯಾಗು.

ವಿದೂ—ಎಲೈ ಮಿತ್ರನೆ ! ದೇವಿ ಎಲ್ಲಿರುವಳು ? ಹೋಗಿ ಎಷ್ಟು ಹೊತ್ತಾಯಿತು ? ಸುಮ್ಮನೆ ಏತಕ್ಕೆ ಅರಣ್ಯರೋದನವನ್ನು ಮಾಡುವೆ ? ಏಳುಏಳು.

ರಾಜ—(ಮುಖವನ್ನೆತ್ತಿ) ಹಾ ! ಹಾ ! ದೇವಿಯು ಅನುಗ್ರಹಿಸ ದೆಯೇ ಹೋದಳೆ ?

ವಿದೂ—ಅನುಗ್ರಹಿಸದೆ ಹೋದಳೆಂದು ಏಕೆ ಹೇಳುವೆ? ಶರೀರದಲ್ಲಿ ಗಾಯುಗೀಯುವಿಲ್ಲದೆ ನಾವು ಉಳಿದುದೇ ಅವಳು ಅನುಗ್ರಹಿಸಿದುದಕ್ಕೆ ಗುರುತಲ್ಲವೆ?

ರಾಜ—ತೆಗೆತೆಗೆ, ಮೂರ್ಖನೇ! ನನ್ನನ್ನೇತಕ್ಕೆ ಇಷ್ಟು ಪರಿಹಾಸಮಾಡುವೆ? ನನಗೆ ಸಂಭವಿಸಿದ ಅನರ್ಥಗಳೆಲ್ಲಾ ನಿನ್ನ ದೆಸೆಯಿಂದಲೇ ಅಲ್ಲವೇ?

ಕಂದ ॥ ರಾಣಿಯುದೆಂದುಂ ನನ್ನೊಳ್
ಕಾಣಳ್ ವಿಪ್ರಿಯುಮನಿಂದು ಕಂಡ ಬಳಿಕ್ಕಂ ॥
ಪ್ರಾಣಂಬಿಡಿದಿರಳೊಲವಿನಿ।
ನೂಣಯುವೆಂದೆನಿಸೆ ಸತಿಯುರೇಂ ಸ್ಯೈರಿಪರೇ ॥

ವಿದೂ—ನಿಜ, ಕುಪಿತಳಾದ ದೇವಿಯು ಏನುಮಾಡಿಕೊಳ್ಳುವಳೊ ಕಾಣೆ; ಆದರೆ ಸಾಗರಿಕೆಯ ಜೀವಕ್ಕೆ ಜೀರಿಗೆಯುನ್ನು ಅರೆಯುದೆ ಬಿಡಳೆಂಬುದನ್ನು ಮಾತ್ರ ಹೇಳಬಲ್ಲೆನು.

(ಸಾಗರಿಕೆಯ ಪ್ರವೇಶ)

ಸಾಗರಿಕೆ—(ಸ್ವಗತ) ದೇವಿಯ ವೇಷವನ್ನು ಧರಿಸಿಕೊಂಡು ಯಾರೂ ತಿಳಿಯದಂತೆ ಚಿತ್ರಶಾಲೆಯಿಂದ ಹೊರಟು ಬಂದೆನು. ಈಗ ಏನುಮಾಡಲಿ? (ಕಣ್ಣೀರುಸುರಿಸುತ್ತಾ ಚಿಂತಿಸುವಳು)

(ರಾಜನು ಕಂಬನಿಗರೆಯುತ್ತಾ ಯೋಚಿಸುತ್ತಿರುವನು)

ವಿದೂ—ಮಿತ್ರನೆ! ಇದೇನು ಮೂಢನಂತೆ ಚಿಂತಿಸುವೆ? ಇದಕ್ಕೆ ತಕ್ಕ ಉಪಾಯವೇನು ನೋಡು.

ರಾಜ—ನಾನು ಅದನ್ನೇ ಯೋಚಿಸುತ್ತಿರುವೆನು.

ಸಾಗ—ಬಲಾತ್ಕಾರದಿಂದ ನಾನು ಪ್ರಾಣಕಳೆದುಕೊಳ್ಳುವುದೇ ಉಚಿತವು. ಏಕೆಂದರೆ, ನಮ್ಮ ಸಂಕೇತ ವೃತ್ತಾಂತವನ್ನು ದೇವಿಯು ತಿಳಿದು ಸುಸಂಗತೆಯನ್ನು ಬಂಧನದಲ್ಲಿ ಹಾಕಿದಳು. ಇನ್ನು ನನ್ನನ್ನು ಏನು ಮಾಡುವಳೋ! ಆದುದರಿಂದ ಈ ಅಶೋಕವೃಕ್ಷದ ಅಡಿಯಲ್ಲಿ ನನ್ನ ಇಷ್ಟವನ್ನು ನೆರವೇರಿಸಿಕೊಳ್ಳುವೆನು.

ರಾಜ—ಮಿತ್ರನೇ ! ಅರಸಿಯನ್ನು ಪ್ರಸನ್ನೀಕರಿಸುವುದೊಂದನ್ನಲ್ಲದೆ ಇನ್ನಾವ ಉಪಾಯವನ್ನೂ ಕಾಣೆ. ನಡೆ. ಅಲ್ಲಿಗೆ ಹೋಗೋಣ. (ಎಂದು ಏಳುವನು)

ವಿದೂ—(ಕೇಳಿ) ರಾಜನೆ ! ಸ್ವಲ್ಪಹೊತ್ತು ನಿಲ್ಲು. ಇಲ್ಲಿ ಯಾರದೋ ಹಜ್ಜೆಯ ಸದ್ದು ಕೇಳಿಸುತ್ತಿದೆ. ನೀನು ವಂದಿಸಿದುದಕ್ಕೆ ಪ್ರಸನ್ನೆಯಾಗದೆ ಹೋದ ದೇವಿಯು ಪಶ್ಚಾತ್ತಾಪದಿಂದ ಪುನಃ ಬರುವ ಹಾಗೆ ತೋರುತ್ತದೆ.

ರಾಜ—ಇರಬಹುದು ; ದೇವಿಯು ಕೇವಲ ಗುಣಾಢ್ಯಳು ; ನೋಡಿ ಹೇಳು.

ವಿದೂ—ಅಪ್ಪಣೆ. (ಮುಂದೆಬರುವನು)

ಸಾಗ—ಈ ಮಾಧವೀಲತೆಯನ್ನು ನೇಣುಮಾಡಿ ಕೊರಳಿಗೆ ಹಾಕಿಕೊಳ್ಳುವೆನು (ಹಾಕಿಕೊಂಡು)



ರಾಗ ‖ ಕಾಪಿ ‖

ಹಾ ! ಹಾ ! ವಿಧಾತ ದಯಾಹೀನ ! ಹಾ ! ।
ಈಹಾಡಿಗಿಂತೆನ್ನ । ನೆಡೆಗೈದೆಯಹಾ ! ‖ ಪ ‖
ಇಂತಾದದುಃಖಕೇಂ ನೋಂತೆನೊ ಹಾ ! ।
ಸಂತೈಪರಾರೆನ್ನ । ಸಂತಾಪವಹಾ ‖ ೨ ‖
ಹಾಮಾತೆ ! ಹಾತಾತ ! ಹಾಭ್ರಾತರಾ!
ಹಾಮಂದಭಾಗ್ಯಳ್ಗೆ ದಿಕ್ಕಿಲ್ಲವೆ ಹಾ ! ‖ ೩ ‖



ಇದೊ, ಅನಾಥಳಾಗಿ ಹೋಗುವೆನು.

ವಿದೂ—(ನೋಡಿ) ಇವಳು ಯಾರಿದ್ದೀತು ? ಓಹೊ ! ಈಕೆ ವಾಸವದತ್ತಾದೇವಿಯು ! ಆತ್ಮಹತ್ಯಕ್ಕೆ ಉಜ್ಜುಗಿಸಿರುವಳು. ಮಿತ್ರನೇ ! ಮಿತ್ರನೆ ರಕ್ಷಿಸುರಕ್ಷಿಸು ; ವಾಸವದತ್ತೆಯು ಆತ್ಮಹತ್ಯೆಮಾಡಿಕೊಳ್ಳುವಳು.

ರಾಜ—(ಹೆದರಿ ಸಮೀಪಕ್ಕೋಡಿಬಂದು) ಮಿತ್ರನೇ ! ಎಲ್ಲಿ ? ಅವಳೆಲ್ಲಿ ?

ವಿದೂ—ಅದೊ, ನೋಡು.

ರಾಜ—(ಕೊರಳಲ್ಲಿದ್ದ ನೇಣನ್ನು ತೆಗೆದುಹಾಕಿ) ಎಲೆ ! ಇದೇನು ? ಇಂತಹ ಅಕಾರ್ಯಕ್ಕೆ ಉಜ್ಜುಗಿಸಿದೆ ?

ಕಂದ ॥ ಬರೆ ನಿನ್ನ ಕೊರಳ್ಗೆ ಪಾಶಂ
ಹರಿಣೀಕ್ಷಣೆ ಎನ್ನ ಕೊರಳ್ಗೆ ಬಂದುದು ಹರಣಂ ॥
ಸರಿಯಲ್ತಲ್ತೀ ಸಾಹಸ
ಮೊರೆ ಕೊರತೆಯಾದೇನು ಬರಿದೆ ಮಾಣಲ್ಕೊಡಲಂ ॥

ರಾಗ ॥ ತಾಳ ॥

ಏನಿದೇನಿಂತುಗೈವರೆ । ಮಾನಿನಿ ॥ ಪ ॥
ನೀನದೇಕೆಪ್ರಾಣ । ಹಾನಿಗೊಳಿಪೆತೆಗೆ ॥ ಅ ॥
ರಾಣಿಕೇಳ್ ಸಾಹಸವನೆ । ನ್ನಾಣೆಮಾಡ
ಬೇಡವೀ । ಪ್ರಾಣವನು ಹಾನಿಗೈಯ್ಯ ।
ಲೂಣಯುವೇನಾದುದು ॥ ೧ ॥
ಸಾಗದಂತಿರೆನ್ನೀಜೀವ । ವೀಗಲೆನ್ನ
ಕಂಠದಿಂ । ಬೇಗಬಾಹು ಪಾಶವನ್ನು ।
ನಾಗವೇಣಿಹಾಕುನೀ ॥ ೨ ॥

ಸಾಗ — (ಹರ್ಷದಿಂದ) ಆಃ ! ಮಹಾರಾಜನನ್ನು ಕಂಡು ಕೃತಾರ್ಥಳಾದೆನು. ಇನ್ನು ಸುಖದಿಂದ ಹರಣವನ್ನು ಕಳೆದುಕೊಳ್ಳುವೆನು. (ಪ್ರಕಾಶ) ಮಹಾರಾಜನೆ ! ಬಿಡುಬಿಡು, ನಾನು ಪರಾಧೀನೆಯು. ನನಗಿಂತಹ ಸಮಯ ಸಿಕ್ಕುವುದಿಲ್ಲ. (ಪುನಃ ನೇಣುಹಾಕಿಕೊಳ್ಳುವಳು)

ರಾಜ—ಓಹೋ ! ಈಕೆಯು ನನ್ನ ಪ್ರಿಯಳಾದ ಸಾಗರಿಕೆ !

ವೃತ್ತ ॥ ಎಲೆಎಲೆ ಲಲಿತಾಂಗೀ ಸಾಕುಸಾಕಿಂತುಸಾಸಂ
ಕಳೆ ಗಳದೊಳಗಿರ್ಪಾ ಪಾಶಮಂ ಬೇಗದಿಂದಂ ॥
ತೊಲಗದ ತೆರದಿಂದಂ ಸಾಗುವೀಜೀವಿತಂ ಮ
ದ್ಗಳದೊಳಗಿಡು ಬಾಹಾಪಾಶಮಂ ಪ್ರಾಣಕಾಂತೇ ॥

(ಕಂಠಾಲಿಂಗನವನ್ನು ಹೊಂದಿ) ಮಿತ್ರನೇ ! ಇದಲ್ಲವೇ ಮುಗಿಲಿಲ್ಲದ ಅಮೃತವೃಷ್ಟಿಯು ?

ವಿದೂ—ಅಹುದು ಅಹುದು ; ಬಿರುಗಾಳಿಯಂತೆ ವಾಸವದತ್ತಾದೇವಿಯು ಬಾರದಿದ್ದರೆ—

(ವಾಸವದತ್ತೆ ಕಾಂಚನಮಾಲೆಯೊಡನೆ ಪ್ರವೇಶಿಸುವಳು)

ವಾಸವ—ಸಖಿ, ಕಾಂಚನಮಾಲೆ! ಆರ್ಯಪುತ್ರನು ವಂದಿಸಿದರೂ ಸಡ್ಡೆಮಾಡದೆ ಬಂದುದು ಬಹಳ ಅನ್ಯಾಯವಲ್ಲವೆ? ಆದುದರಿಂದ ನಾನೇ ಹೋಗಿ ಸಂತಯಿಸುವೆನು.

ಕಾಂಚನ—ದೇವಿ! ನೀನಲ್ಲದೆ ಇನ್ನಾರು ಹೀಗೆ ಹೇಳಿಯಾರು? ಯುಕ್ತ. ಅವರ ದೌರ್ಜನ್ಯವು ಅವರಲ್ಲೇ ಇರಲಿ; ಹೋಗಿ ಸಂತಯಿಸು.

ರಾಜ—ಎಲೆ ಮುಗ್ಧೆ! ಇದೇನು? ಈಗಲೂ ನನ್ನ ಮನೋರಥವನ್ನು ಸಫಲಮಾಡದಿರುವೆ?

ಕಾಂಚ—ದೇವಿ! ಮಹಾರಾಜನು ಮಾತನಾಡುವಂತಿದೆ. ಒಂದುವೇಳೆ ನಿನ್ನನ್ನು ಸಮಾಧಾನಪಡಿಸುವುದಕ್ಕೆ ಬರಬಹುದೆಂದು ಯೋಚಿಸುವೆನು.

ವಾಸವ—ಹಾಗಾದರೆ ಆರ್ಯಪುತ್ರನು ಕಾಣದಂತೆ ಮರೆಯಾಗಿ ಹೋಗಿ ಕಂಠಾಲಿಂಗನವನ್ನು ಮಾಡಿಕೊಳ್ಳುವೆನು.

ವಿದೂ—ಸಾಗರಿಕೆ! ಏತಕ್ಕೆ ಮೌನದಿಂದಿರುವೆ? ರಾಯನೊಡನೆ ಸವಿನುಡಿಗಳಿಂದ ಸಲ್ಲಾಪಿಸು.

ವಾಸವ—(ಕೇಳಿ ಕೋಪದಿಂದ) ಎಲೆ ಕಾಂಚನಮಾಲೆ! ಸಾಗರಿಕೆಯೂ ಇಲ್ಲೇ ಇರುವಂತಿದೆ. ಇವರ ಗುಟ್ಟಿನ ಮಾತುಗಳನ್ನು ಕೇಳುವೆನು. ಸ್ವಲ್ಪ ನಿಲ್ಲು. (ಮರೆಯಲ್ಲಿ ನಿಲ್ಲುವರು)

ರಾಜ—ಎಲೆ ಪ್ರಿಯೆ,

ಕಂದ ॥ ಸ್ಮರಶಿಖಿ ಸುಟ್ಟಪುದೆನ್ನಯ
ಶರೀರಮಂ ಲಜ್ಜೆಪಡದೆ ತಕ್ಕೈಸುತೆ ನೀಂ ॥
ನೆರೆ ತಂಪಿಸು ಪೂರ್ಣಪಯೋ
ಧರ ಕಲಶಸ್ಪರ್ಶದಿಂದಲೆನ್ನೀಯೆರ್ದೆಯಂ ॥

ಸಾಗ—ಎಲೈ ಮಹಾರಾಜನೆ! ಈ ಮಿಥ್ಯಾದಾಕ್ಷಿಣ್ಯದಿಂದ ಫಲವೇನು? ಪ್ರಾಣಕ್ಕಿಂತಲೂ ಪ್ರಿಯಳಾದ ದೇವಿಗೆ, ತಪ್ಪನ್ನೆಸಗಿ ಏತಕ್ಕೆ ಸುಮ್ಮನೆ ಅಪರಾಧಿಯೆನಿಸಿಕೊಳ್ಳುವೆ?

ರಾಜ—ಎಲೆ ಪ್ರಿಯೆ! ನೀನಲ್ಲವೇ ಮಿಥ್ಯಾವಾದಿನಿ? ಕೇಳು;

ಕಂದ ॥ ಮಡದಿಮಣಿ ಪುರ್ಬುಗಂಟಿಡೆ
ನಡುಗಿದೆ ಮುಳಿಸಿಂದೆನೋಡಲೆರಗಿದೆನೆನ್ನೀ ॥
ನಡತೆಯುಸಾಕಲೆದೇವಿಗೆ ।
ಕಡುಮೋಹಂ ನಿನ್ನೊಳೆನಗೆ ಕಮಲದಳಾಕ್ಷಿ ॥

ವಾಸವ—(ಕೋಪದಿಂದ ರಾಯನ ಬಳಿಗೆ ಬಂದು, ಗಲ್ಲವನ್ನು ಮುಟ್ಟಿ) ಆರ್ಯಪುತ್ರನೇ! ಹಾಗೋ? ಸರಿಸರಿ ನಿಜವಾಗಿ ಹೇಳಿದೆ.

ರಾಜ—ದೇವಿ! ನಿಷ್ಕಾರಣವಾಗಿ ಏತಕ್ಕೆ ಕೋಪಿಸಿಕೊಳ್ಳುವೆ? ನಿನ್ನ ವೇಷಸಾದೃಶ್ಯದಿಂದ ನೀನೇ ಎಂದು ತಿಳಿದು ಮೋಸಹೋಗಿ ಇಲ್ಲಿಗೆ ಬಂದೆನು. ಹೇಗಾದರೂ ನನ್ನಲ್ಲಿ ಪ್ರಸನ್ನಳಾಗು. (ಎಂದು ತಲೆಬಾಗುವನು).

ವಾಸವ—ಆರ್ಯಪುತ್ರನೆ! ಬಿಡು ಬಿಡು, ನನ್ನಲ್ಲಿ ಬರಿನಡತೆ ತಾನೆ? ಆಗಲಿ, ಸಂತೋಷ.

ರಾಯ—(ಸ್ವಗತ) ಅಹಾ! ನಾನಾಡಿದುದನ್ನು ಕೇಳಿರಬಹುದು. ಇನ್ನಾವರೀತಿಯಿಂದ ದೇವಿಯನ್ನು ಸಮಾಧಾನಪಡಿಸಲಿ?

ವಿದೂ—ಎಲೌ ದೇವಿಯೆ! ನಿನ್ನ ವೇಷಸಾದೃಶ್ಯದಿಂದರಿಯದೆ, ನೀನು ಆತ್ಮಹತ್ಯಮಾಡಿಕೊಳ್ಳುತ್ತಿರುವೆ ಎಂದರಿತು ಪ್ರಿಯಮಿತ್ರನನ್ನಿಲ್ಲಿಗೆ ನಾನು ಕರೆತಂದೆನು. ನಿನಗೆ ನಂಬುಗೆ ಇಲ್ಲದಿದ್ದರೆ ನನ್ನ ಕೈಯಲ್ಲಿರುವ ಲತಾಪಾಶವನ್ನು ನೋಡು. (ತೋರಿಸುವನು.)

ವಾಸವ—(ಕೋಪದಿಂದ) ಎಲೆ ಕಾಂಚನಮಾಲೆ! ಈ ಲತಾಪಾಶದಿಂದಲೇ ಈ ಕೆಟ್ಟಹಾರುವನನ್ನು ಕಟ್ಟಿ ಎಳೆದುಕೊಂಡುಬಾ. ಈ ದುಷ್ಟ ಕನ್ಯಕೆಯನ್ನೂ ಎಳೆದುಕೊಂಡು ನಡೆ.

ಕಾಂಚ—ಅಪ್ಪಣೆ. (ವಿದೂಷಕನನ್ನು ಕಟ್ಟಿ) ಎಲೆ ಕೇಡಿಗನೇ! ನಿನ್ನ ಕೆಡಕುತನಕ್ಕೆ ತಕ್ಕ ಫಲವನ್ನನುಭವಿಸು. (ಹೊಡೆದು) ಎಲೆ ಸಾಗರಿಕೆ! ನೀನು ಇವನ ಮುಂದೆ ನಡೆ.

ಸಾಗ—(ಆತ್ಮಗತ) ಹಾ! ದೈವವೇ! ಮಂದಭಾಗ್ಯಳಾದ ನನಗೆ ಪ್ರಾಣವನ್ನು ಕಳೆದುಕೊಳ್ಳುವುದಕ್ಕೂ ಆಗದಹಾಗಾಯಿತೆ!

ವಿದೂ—(ದುಃಖದಿಂದ ರಾಜನನ್ನು ನೋಡಿ)

ರಾಗ ॥ ತಾಳ ॥

ಏನುಗತಿಯೊ ಮಿತ್ರನೆ । ಭೂನುತಸುಚರಿತ್ರನೆ ॥ ಪ ॥
ಕೈನೆಈಕೆಏನ್ನನು । ಮಾನಗೆಡಿಸುತುಯ್ವಳು ॥ ಅ ॥
ದಿಟ್ಟೆಕೈಗೆ ಸಿಕ್ಕಿನಾಂ । ಪೆಟ್ಟಿಗೆಗುರಿಯಾದೆನೇ ।
ಇಟ್ಟುಕೃಪೆಯನೆನ್ನೊಳು । ಕಟ್ಟುಬಿಡಿನಿ ರಕ್ಷಿಸ್ಯೆ ॥ ೧ ॥

(ಕಾಂಚನಮಾಲೆ ಎಳೆದುಕೊಂಡುಹೋಗುವಳು. ಸಾಗರಿಕೆಯೂ ವಾಸವದತ್ತೆಯೂ ಹೋಗುವರು).

॥ರಾಗ ॥ ತಾಳ ॥

ರಾಜ—ಅಂತರಂಗದ ಚಿಂತೆಯಾ । ಎಂತೆಸೈರಿಪೆ ಹಾಹಾ ॥ ಪ ॥
ಕಾಂತೆ ಕೋಪವನ್ನುತಾ । ನಾಂತುಪೋದಳು ॥ ಅ ॥
ಮರುಗಲೊ ಕೋಪವಾಂ । ತರಸಿಯಂದಕೆ ।
ಮರುಗಲೋವಿತ್ರಗೆ । ದೊರೆದ ಬಂಧಕೆ ॥ ೧ ॥
ಮರುಗಲೊ ರೋಷದಿಂ । ದರಸಿಗೈದುದ ।
ಕಿರದೆನೊಂದು ಸಾ । ಗರಿಕೆಪೋದುದಾ ॥ ೨ ॥

(ದುಃಖಿಸುತ್ತಾ ಹೋಗುವನು).

ಮೂರನೆಯಂಕಂ ಸಂಪೂರ್ಣಂ



# ನಾಲ್ಕನೆಯಂಕಂ

(ರತ್ನಮಾಲಿಕೆಯನ್ನು ಹಿಡಿದು ಸುಸಂಗತೆಯು ಪ್ರವೇಶ)

॥ ರಾಗ ॥ ತಾಳ ॥

ಸುಸಂಗ ॥ ಸುಂದರೀಮಣಿ ಸಖಿ । ಪ್ರಿಯೋನೀರೇಜಾಕ್ಷಿ ।
ಕುಂದಕೋಶಾಧರದೆ ! ಹಾ ಸಖಿಯೆತ್ತಪೋದೆ ॥
ನಿನ್ನವೋಲಿಹಸಖಿಯು । ಎಲ್ಲಿನಾನೋಳ್ಪೆನಯ್ಯೋ ।
ಕನ್ನೆಯೆ ಪೇಳು ಕೋಕಿಲಾರವೆ ಯಕಟಾನೇವೆ ॥ ೧ ॥

ಹಾ, ದೈವವೇ ! ಎಲ್ಲೆಲ್ಲೂ ಇಲ್ಲದ ಅಂತಹ ಚೆಲುವಿಕೆಯನ್ನು ಅವ ಳಲ್ಲಿ ಏಕೆ ನಿರ್ಮಿಸಿದೆ? ಅವಳಿಗೆ ಇಂತಹ ದುರವಸ್ಥೆಯನ್ನು ಏಕುಂಟು ಮಾಡಿದೆ? ನಿನ್ನ ನಿಷ್ಕರುಣತೆಯನ್ನೇನೆಂದು ಹೇಳಲಿ? (ರತ್ನಮಾ ಲಿಕೆಯನ್ನು ನೋಡಿ) ಇದನ್ನು ವಸಂತಕನಿಗೆ ಕೊಡುವುದೆಂದು ನನ್ನ ಸಖಿಯಾದ ಸಾಗರಿಕೆಯು ನನ್ನಕೈಗೆ ಕೊಟ್ಟಳು. ಆದರೆ ಆತನನ್ನು ನಾನೆಲ್ಲಿ ಕಾಣಲಿ? (ಮುಂದೆನೋಡಿ) ಇದೊ, ವಸಂತಕನು ಇಲ್ಲೇ ಬರುವನು. ಇದನ್ನು ಈತನ ಕೈಗೆ ಕೊಡುವೆನು.

ವಿದೂ—(ಬಂದು) ಈಗತಾನೇ ನನ್ನ ಪ್ರಿಯಮಿತ್ರನು ದೇವಿಯ ಮುನಿಸನ್ನು ತಿಳಿಸಿ ಸಂತೈಸಿದನು. ಆದುದರಿಂದ,

॥ ರಾಗ ॥ ತಾಳ ॥

ಧನ್ಯನುನಾಂಭಲೆಧನ್ಯನು ॥ ಪ ॥
ಇಂದೆನ್ನಬಂಧನ । ದಿಂದೇವಿಯಕೃಪೆ ॥ ಅ ॥
ಯಿಂದಾಹಾ ! ಬಿಡೆನಾಂ । ಬಂದೆನು ॥ ೧ ।
ಅಂಬಿಕೆಕೊಟ್ಟ ಕ ಡುಂಬುಗಳಿಂದ
ತುಂಬಹೊಟ್ಟೆಯು । ತುಂಬಿದೆ ॥ ೨ ॥
ಮುಡಿಗೆರುಮಾಲು । ಒಡಲಿಗೆಶಾಲು
ಪಡೆದಾನೆವೋಲು । ನೋಡಲು ॥ ೩ ॥

ಆದುದರಿಂದ ಈಗಲೇಹೋಗಿ ಪ್ರಿಯಮಿತ್ರನನ್ನು ನೋಡುವೆನು.

ಸುಸಂ—(ಅಳುತ್ತಾ ವಿದೂಷಕನ ಬಳಿಗೆ ಬಂದು) ಆರ್ಯವಸಂತಕನೆ! ಸ್ವಲ್ಪ ನಿಲ್ಲು.

ವಿದೂ—ಸುಸಂಗತೆ! ಏತಕ್ಕೆ ಅಳುವೆ? ಸಾಗರಿಕೆಗೇನೂ ಭಯವಿಲ್ಲವಷ್ಟೆ?

ಸುಸಂ—ಪ್ರಿಯವಸಂತಕನೆ! ಆ ಸಂಗತಿಯನ್ನು ಹೇಳುವೆನು ಕೇಳು; ದೇವಿಯು ಅತಿದೀನಳಾದ ಸಾಗರಿಕೆಯನ್ನು ಉಜ್ಜಯಿನಿಗೆ ಕಳುಹಿಸಿಬಿಟ್ಟೆನೆಂಬ ಒಂದು ಸುದ್ದಿಯನ್ನು ಹುಟ್ಟಿಸಿ, ಅವಳನ್ನು ಅಂತಃಪುರದಲ್ಲಿ ಬಂಧನದಲ್ಲಿ ಹಾಕಿಸಿರುವಳು. ಆದುದರಿಂದ ಅವಳು ಆಯೆಡೆಯಲ್ಲಿ ಏನಾಗುವಳೋ ಎಂದು ದುಃಖಿಸುತ್ತಲಿರುವೆನು.

ವಿದೂ—(ಸಂತಾಪದಿಂದ) ಹಾ! ದೇವಿಯು ಎಷ್ಟು ಕ್ರೂರಳು!

ಸುಸಂ—ಆರ್ಯವಸಂತಕನೆ! ನನ್ನ ಪ್ರಿಯಸಖಿಯು ತನ್ನ ಜೀವದಾಸೆಯನ್ನು ತೊರೆದು ಈ ರತ್ನಮಾಲಿಕೆಯನ್ನು ಆರ್ಯವಸಂತಕನಿಗೆ ಕೊಡೆಂದು ಹೇಳಿ ನನ್ನ ಕೈಗೆ ಕೊಟ್ಟಿರುವಳು. ಆದುದರಿಂದ ಇದನ್ನು ಸ್ವೀಕರಿಸು.

ವಿದೂ—(ಕಣ್ಣೀರಿನಿಂದ ಕೂಡಿ) ಇಂತಹ ವರ್ತಮಾನವನ್ನು ಕೇಳಿ ಇದನ್ನು ತೆಗೆದುಕೊಳ್ಳುವುದಕ್ಕೆ ನನ್ನ ಕೈ ಹಿಂದೆಗೆಯುವುದು. (ಇಬ್ಬರೂ ಅಳುವರು)

ಸುಸಂ—(ಕೈಮುಗಿದು) ಅವಳ ಅನುಗ್ರಹಾರ್ಥವಾಗಿಯಾದರೂ ಇದನ್ನು ಪರಿಗ್ರಹಿಸು.

ವಿದೂ—ಹಾಗಾದರೆ ತಾ. ಇದನ್ನು ತೋರಿಸಿ ಸಾಗರಿಕೆಯ ವಿರಹದಿಂದ ಕಳವಳಿಸುವ ನಮ್ಮ ಮಹಾರಾಜನ ದುಗುಡವನ್ನು ಪರಿಹರಿಸುವೆನು.

ಸುಸಂ—(ಕೊಡುವಳು)

ವಿದೂ—(ತೆಗೆದುಕೊಂಡು) ಸುಸಂಗತೆ! ಈ ಅನರ್ಘವಾದ ರತ್ನಮಾಲಿಕೆಯು ಈಕೆಗೆ ಹೇಗೆಬಂದಿತು?

ಸುಸಂ—ನಾನೂ ಹೀಗೆಯೇ ಆಶ್ಚರ್ಯಪಟ್ಟು ಅವಳನ್ನು ಕೇಳಿದೆನು.

ವಿದೂ—ಅವಳು ಅದಕ್ಕೆ ಏನುಹೇಳಿದಳು;

ಸುಸಂ—ಅದಕ್ಕವಳು ನಿಟ್ಟುಸಿರುಬಿಟ್ಟು ಆ ಸಂಗತಿಯನ್ನು ಹೇಳಿ ಫಲವೇನೆಂದು ಅಳುವುದಕ್ಕೆ ಪ್ರಾರಂಭಿಸಿದಳು.

ವಿದೂ--ಹೇಳದಿದ್ದಮಾತ್ರಕ್ಕೇನು ? ಅವಳ ಈ ಆಭರಣದಿಂದಲೂ ಅವಳ ಗಂಭೀರಗುಣದಿಂದಲೂ, ಹೇಳಿದ ಹಾಗೆಯೇ ಆಯಿತು. ಆಕೆ ಯಾವಳೋ ಮಹಾಕುಲಪ್ರಸೂತೆಯಾಗಿರಬೇಕು. ಒಳ್ಳೆಯದು, ಮಹಾರಾಜನು ಎಲ್ಲಿರುವನು ಹೇಳು ?

ಸುಸಂ—ಆರ್ಯನೆ, ಈಗತಾನೇ ದೇವಿಯ ಅಂತಃಪುರದಿಂದ ಹೊರಟು ಸ್ಫಟಿಕಮಂಟಪದಲ್ಲಿ ಕುಳಿತಿರುವನು. ಅಲ್ಲಿಗೆ ಹೋಗು. ನಾನು ದೇವಿಯ ಸಮೀಪಕ್ಕೆ ಹೋಗುವೆನು. (ಎಂದಿಬ್ಬರೂ ಹೋಗುವರು.)

(ಸ್ಫಟಿಕ ಮಂಟಪದಲ್ಲಿ ಪೀಠಗತನಾದ ರಾಜನ ಪ್ರವೇಶ)

॥ ರಾಗ ॥ ತಾಳ ॥

ಎಂತುಸೈಪೆನಿನ್ನು ಚಿಂತೆಯನಾ ।
ನಾಂತೀಗೆಂತು ॥ ಪ ॥
ದೇವಿಕೋಪದಿ ಹೇಯವಗೊಳಿಸೆ ।
ಭಾವದಲ್ಲಿ ಭಾವೆನೊಂದು ।
ಕಾವರಿಲ್ಲವೇನೇನೆಂದು ।
ನೋವನಾಂತೋವೊನೋಳ್ಪುದ । ೧ ।
ಅರಸಿಗಂಜಿ ಮರುಗುತೆನ್ನ ।
ಶರಣುಹೊಕ್ಕತೆರದಿ ಸ್ಮರನ ।
ಶರದಿ ರಂಧ್ರವೆರಸಿದೆದೆಯ
ತರುಣಿಪೊಕ್ಕ ಪರಿಯನಕ್ಕಟ ॥ ೨ ॥

ಇದಲ್ಲದೆ ನನಗೆ ವಿನೋದಸ್ಥಾನನಾದ ವಸಂತಕನನ್ನೂ ಕೂಡ ದೇವಿಯು ಕೋಪದಿಂದ ಸೆರೆಹಾಕಿದಳು. ಈಗ ನನಗೆ ಬಂದ ದುಗುಡವನ್ನು ಇನ್ನಾರಿಂದ ಕಳೆದುಕೊಳ್ಳಲಿ ? (ಅಳುವನು)

ವಿದೂ--(ಬಂದುನೋಡಿ) ಆಃ ! ಮಹಾರಾಜನು ಪ್ರಿಯೆಯ ವ್ಯಸನದಿಂದ ಬಡವಾಗಿದ್ದರೂ, ಕಾಂತಿವಿಶೇಷದಿಂದ ಬಿದಿಗೆಯ ಚಂದ್ರನಂತೆ ಹೊಳೆಯುತ್ತಿರುವನು. (ಸಮೀಪಕ್ಕೆ ಬಂದು) ಮಿತ್ರನೆ ! ನಿನಗೆ ಮಂಗಳವಾಗಲಿ, ದೇವಿಯ ಕೈಗೆ ಸಿಕ್ಕಿಯೂ, ದೈವಯೋಗದಿಂದ ಬಿಡಿಸಿಕೊಂಡು ಬಂದು ಈ ಕಣ್ಣಿನಿಂದಲೇ ನಿನ್ನನ್ನು ಕಂಡೆನಲ್ಲಾ !

ರಾಜ–(ಸಂತೋಷದಿಂದ) ಎಲೈ ಮಿತ್ರನೇ, ನನ್ನನ್ನಾಲಿಂಗಿಸು ಬಾ.

ವಿದೂ—(ಆಲಿಂಗಿಸಿ) ಮಿತ್ರನೇ! ದೇವಿಯಿಂದ ಅನುಗ್ರಹಿಸಲ್ಪಟ್ಟೆನು.

ರಾಜ—ನಿನ್ನ ಮುಖದ ಸುಮ್ಮಾನವೇ ಹೇಳುವುದು. ಅದಿರಲಿ. ಸಾಗರಿಕೆಯ ಸಂಗತಿಯೇನು ? ಹೇಳು.

ವಿದೂ—(ನೆಲವನ್ನು ನೋಡುತ್ತ ಸುಮ್ಮನೆ ನಿಂತಿರುವನು)

ರಾಜ—ಮಿತ್ರನೆ ! ಏತಕ್ಕೆ ಮೌನದಿಂದಿರುವೆ ?

ವಿದೂ—ಮಿತ್ರನೇ ! ನಿನಗೆ ನಾನು ಅಪ್ರಿಯವನ್ನು ಹೇಳಬಾರದೆಂದು.

ರಾಜ—(ಭಯದಿಂದ)ಅದೇನಪ್ರಿಯ ? ನನ್ನ ಪ್ರಿಯೆ ಪ್ರಾಣವನ್ನೇನಾದರೂ ಕಳೆದುಕೊಂಡಳೋ ? ಹಾ ! ಪ್ರಿಯೆ ! ಸಾಗರಿಕೇ !(ಮೂರ್ಛಿಸುವನು)

ವಿದೂ—ಮಹಾರಾಜನೆ ! ಸಂತೈಸಿಕೊ ಸಂತೈಸಿಕೊ.

ರಾಜ—(ನಿಟ್ಟುಸಿರುಬಿಡುವನು)

ವಿದೂ—ಮಿತ್ರನೇ ! ಅನ್ಯಥಾ ಎಣಿಸಬೇಡ. ದೇವಿಯು ಸಾಗರಿಕೆಯನ್ನು ಉಜ್ಜಯಿನೀ ಪಟ್ಟಣಕ್ಕೆ ಕಳುಹಿಸಿಬಿಟ್ಟಳು ; ಆದುದರಿಂದ ಆ ಮಾತು ನಿನಗೆ ಅಪ್ರಿಯವೆಂದು ತಿಳಿಸಲಿಲ್ಲ.

ರಾಜ—ಹಾ ! ದೇವಿಗೆ ನನ್ನಲ್ಲಿ ಸ್ವಲ್ಪವಾದರೂ ದಾಕ್ಷಿಣ್ಯವಿಲ್ಲದೆ ಹೋಯಿತೇ ? ಒಳ್ಳೆಯದು, ಈ ಸಂಗತಿಯನ್ನು ನಿನಗೆ ಹೇಳಿದವರು ಯಾರು ?

ವಿದೂ—ಮಿತ್ರನೆ ! ಸುಸಂಗತೆ ಹೇಳಿದಳು. ಈ ರತ್ನಮಾಲಿಕೆಯನ್ನು ನನಗೇಕೆ ಕೊಟ್ಟು ಕಳುಹಿಸಿದಳೊ ಕಾಣೆ. (ಕೊಡುವನು)

ರಾಜ—(ತೆಗೆದು ಎದೆಯಮೇಲಿಟ್ಟುಕೊಂಡು)

॥ ರಾಗ ॥ ನಾದನಾಮಕ್ರಿಯ ॥

ಸರವೇ ಕಾಂತೆಯ ಕಂಠದ ಮಣಿ ॥ ಪ ॥
ಅಂಬುಜನೇತ್ರೆಯ । ಕಂಬುಕಂಠವನುಸೀ ।
ನಿಂಬುಗೊಂಡಿರ್ದುದವೋ । ಣಿಂದುಜಾರಿದೆಯೇಕೆ ॥ ೧ ॥
ಇನಿಯಳ ಕಂಠಾಲಿಂ । ಗನವನು ಬಿಟ್ಟು ಬಂ ।
ದೆನಗು ನಿವಗುವೊಂದೇ । ಅನುವಾದುದಕ್ಕಟಾ ॥ ೨ ॥

ಇಂದುಮುಖಿಯಕೊರ । ಳಿಂದಜಾರುತ್ತರೈ ।
ತಂದೆನ್ನ ಪ್ರಿಯಸಖಿ । ಯುಂದದಿಸಂತೈಪೆ ॥ ೩ ॥

ವಸಂತಕನೆ ! ಈ ರತ್ನಮಾಲಿಕೆಯನ್ನು ನಿನ್ನ ಕಂಠದಲ್ಲಿಯೇ ಧರಿಸಿಕೊ. ನಾನು ಇದನ್ನು ನೋಡುತ್ತಾ ಆಕೆಯನ್ನು ನೋಡಿದಂತೆ ಸಂತೋಷ ಪಡುವೆನು.

ವಿದೂ—ಅಪ್ಪಣೆ (ಎಂದು ಕೊರಳಿಗೆ ಹಾಕಿಕೊಳ್ಳುವನು)

ರಾಜ—ಮಿತ್ರನೇ, ಹಾಗಾದರೆ ಸಾಗರಿಕೆಯ ದರ್ಶನವು ಇನ್ನು ನನಗೆ ದುರ್ಲಭವಷ್ಟೆ ?

ವಿದೂ—ಮಿತ್ರನೆ, ಸುಮ್ಮನಿರು ; ಇಲ್ಲಿ ದೇವಿಯ ಸೇವಕಿಯರೇ ನಾದರೂ ಸಂಚರಿಸುತ್ತಿರಬಹುದು. (ಕೇಳಿ) ಮಹಾರಾಜನೆ ! ಇದೇನೋ ಹಜ್ಜೆಯ ಸದ್ದು ಕೇಳಬರುವುದು. ಕೇಳು.

ಕಾಂಚನಮಾಲೆ—(ಬಂದು ಸ್ವಗತ) ದೇವಿಯು ತಮ್ಮ ದೇಶದಿಂದ ಬಂದಿರುವ ಇಂದ್ರಜಾಲಿಕನನ್ನು ಕರೆದುಕೊಂಡುಹೋಗಿ ಮಹಾರಾಜನಿಗೆ ತೋರಿಸೆಂದು ನನಗೆ ಆಜ್ಞಾಪಿಸಿರುವಳು. (ಪ್ರಕಾಶ) ಮಹಾರಾಜನೆ ! ಸಂವರಣಸಿದ್ಧಿಯೆಂಬ ಇಂದ್ರಜಾಲಿಕನು ಉಜ್ಜಯಿನಿಯಿಂದ ಬಂದಿರುವನು. ಅವನ ವಿದ್ಯೆಯನ್ನು ತಾವು ಪರಾಮರ್ಶಿಸಬೇಕೆಂದು ರಾಣಿಯು ವಿಜ್ಞಾಪಿಸಿರುವಳು.

ರಾಜ—ಎಲೆ ಕಾಂಚನಮಾಲೆ, ಇಲ್ಲಿ ಏಕಾಂತವಾಗಿರುವುದು. ಆತನು ನಿಮ್ಮ ದೇಶೀಯನಾದುದರಿಂದ ನೀನೂ ಬಂದರೆ ಇಬ್ಬರೂ ನೋಡ ಬಹುದು—ಎಂದು ನಾನು ಹೇಳಿದೆನೆಂದು ದೇವಿಗೆ ತಿಳಿಸಿ ಕರೆದುಕೊಂಡು ಬಾ. (ಕಾಂಚನಮಾಲೆ ಹೋಗುವಳು)

ವಸುಂಧರೆ—(ಪ್ರವೇಶ) ಮಹಾರಾಜನಿಗೆ ವಿಜಯವಾಗಲಿ. ಬಾಗಿಲಲ್ಲಿ ರುಮಣ್ವಂತನ ಸೋದರಳಿಯನಾದ ವಿಜಯವರ್ಮನು ತಮಗೆ ಏನೋ ಒಂದು ಶುಭವಾರ್ತೆಯನ್ನು ಅರಿಕೆಮಾಡಲು ಬಂದಿರುವನು.

ರಾಜ—ತಡವೇಕೆ ? ಬೇಗ ಕರೆದುಕೊಂಡು ಬಾ.

ವಸುಂ—(ಕರೆತರುವಳು.)

ವಿಜಯವರ್ಮ—(ಬಂದು) ಮಹಾರಾಜನೆ ! ದೈವಾನುಕೂಲ್ಯದಿಂದ ಸಂಭವಿಸಿದ ರುಮಣ್ವಂತನ ವಿಜಯದಿಂದ ವರ್ಧಿಸುವೆಯಾ ?

ರಾಜ—ಕೋಸಲದೇಶದ ಅರಸನು ಪರಾಜಿತನಾದನೆ?

ವಿಜಯವರ್ಮ—ಅಹುದು, ಸ್ವಾಮಿಯ ಅನುಗ್ರಹದಿಂದ.

ರಾಜ—ಭಾಪು! ರುಮಣ್ವಂತನೆ! ಭಾಪು! ಎಷ್ಟು ಶೀಘ್ರವಾಗಿ ಕಾರ್ಯವನ್ನು ನೆರವೇರಿಸಿದೆ. ಎಲೈ ವಿಜಯವರ್ಮನೆ, ಈಗ ರುಮಣ್ವಂತನು ಎಲ್ಲಿ?

ವಿಜಯ—ಮಹಾರಾಜನೆ! ಆ ಸಾಹಸಿಯಾದ ಕೋಸಲಪತಿಯನ್ನು ಜಯಿಸಿ, ಅಲ್ಲಿಗೆ ತನ್ನ ಅಣ್ಣನಾದ ವಿಜಯವರ್ಮನನ್ನು ಪ್ರತಿಷ್ಠಿಸಿ, ಗಾಯವಡೆದ ಕೆಲವು ಗಜಘಟೆಗಳೊಡನೆ ಕೂಡಿ, ಮೆಲ್ಲಗೆ ಬರುತ್ತಿರುವನು.

ರಾಜ—ವಸುಂಧರೆ, ಬರುವ ರುಮಣ್ವಂತನಿಗೆ ನಮ್ಮ ಅನುಗ್ರಹ ವಿಶೇಷವನ್ನು ತೋರಿಸೆಂದು ಮಂತ್ರಿಗೆ ಹೇಳು.

ವಸುಂ—ಅಪ್ಪಣೆ. (ವಿಜಯವರ್ಮನೊಡನೆ ಹೋಗುವಳು)

(ಕಾಂಚನಮಾಲೆ ವಾಸವದತ್ತೆಯರ ಪ್ರವೇಶ)

ವಾಸವ—(ಪ್ರಕಾಶ) ಆರ್ಯಪುತ್ರನಿಗೆ ವಿಜಯವಾಗಲಿ.

ರಾಜ—ದೇವಿ! ನಿಮ್ಮ ಇಂದ್ರಜಾಲಿಕನ ಕೌಶಲವನ್ನು ಸ್ವಲ್ಪಹೊತ್ತು ಕುಳಿತು ನೋಡೋಣ; ಬಾ. (ಕುಳಿತುಕೊಳ್ಳುವರು.)

ವಾಸ—ಸಖಿ! ಕಾಂಚನಮಾಲೆ! ಆ ಇಂದ್ರಜಾಲಿಕನನ್ನು ಕರೆದು ಕೊಂಡುಬಾ. (ಹೋಗುವಳು)

ಇಂದ್ರ—(ಪ್ರವೇಶಿಸಿ ನವಿಲುಗರಿಯನ್ನು ತಿರಿಗಿಸುತ್ತಾ)

ಕಂದ ‖ ಎರಗುವೆನಮರೇಂದ್ರಂಗಂ
ಧರೆಯೊಳಗೀಯಿಂದ್ರಜಾಲಕಧಿಪತಿಯಾದಂ ‖
ಗರಿದೀವಿದ್ಯೆಯನೆನಗಾ
ದರದಿಂ ಕಲಿಸಿರ್ಪ ಗುರುವಿನಡಿದಾವರೆಗಂ ‖

ಮಹಾರಾಜನಿಗೆ ಜಯವಾಗಲಿ; ಎಲೈಮಹಾರಾಜನೆ,

ಕಂದ ‖ ಧರಣಿಯೊಳಂ ಚಂದ್ರನನಂ
ಬರದೊಳಗದ್ರಿಯಕೃಶಾನುವಂ ಸಲಿಲದೊಳಂ ‖
ವಿರಚಿಪೆನೆಂದುದನೆಲ್ಲವ
ನಿರದಾಂ ಗುರುಮಂತ್ರಬಲದೊಳಿದೆ ತೋರಿಸುವೆಂ ‖

ಮಹಾರಾಜನೆ ! ಇದಲ್ಲದೆ ತಮ್ಮ ಮನಸ್ಸಿನಲ್ಲಿರುವುದನ್ನು ಕೂಡಾ ತೋರಿವೆನು.

ವಿದೂ—ಮಹಾರಾಜನೆ ! ಇವನ ಗರುವಿಕೆಯನ್ನು ನೋಡಿದರೆ ನಿಜವಾಗಿ ತೋರಿಸಬಲ್ಲನೆಂದು ಕಾಣುವುದು.

ಇಂದ್ರ—ಎಲೈ ಮಹಾರಾಜನೆ ! ನೋಡಬೇಕು ;

ಕಂದ ॥ ಹರಿಯಿಾತಂ ಹರನೀತಂ
ಸರಸಿಜಭವನೀತನಿಂದ್ರನೀತಂ ನೋಡ ॥
ಚ್ಚರಸಿಯರೀಕೆಯುರಡಿನೇ
ವುರವುಲಯಲ್ ನಚ್ಚಣಿಸುವರಂಬರದೆಡೆಯೊಳ್ ॥

ವಿದೂ—ಎಲೋ ತೊತ್ತಿನಮಗನೇ ! ಅವರನ್ನೆಲ್ಲಾ ತೋರಿಸಿದುದರಿಂದ ನಿನಗೇನು ಪ್ರಯೋಜನ ? ರಾಜನನ್ನು ಸಂತೋಷಪಡಿಸಿ ಸನ್ಮಾನವನ್ನು ಪಡೆಯಬೇಕಾದರೆ ಸಾಗರಿಕೆಯನ್ನು ತೋರಿಸು.

ಇಂದ್ರಜಾ—ಅಪ್ಪಣೆಯಾದರೆ ನೋಡತಕ್ಕ ಇನ್ನೊಂದು ವಿಶೇಷ ವಿದ್ಯೆಯಿರುವುದು. ಅದನ್ನು ಅವಶ್ಯಕವಾಗಿ ನೋಡಬೇಕು.

ಪ್ರತೀಹಾರಿ—(ಬಂದು) ಮಹಾರಾಜನಿಗೆ ವಿಜಯವಾಗಲಿ. ತಮ್ಮ ದರ್ಶನಾರ್ಥವಾಗಿ ವಸುಭೂತಿಯು ಒಬ್ಬ ಕಂಚುಕಿಯೊಡನೆ ಬಾಗಿಲಲ್ಲಿ ಕಾದಿರುವನು.

ವಾಸವದತ್ತೆ—ಆರ್ಯಪುತ್ರನೆ ! ಈ ನೋಟಹಾಗಿರಲಿ. ಬಹುದಿವಸಕ್ಕೆ ನಮ್ಮ ಸೋದರಮಾವನ ಮನೆಯಿಂದ ಅಮಾತ್ಯ ವಸುಭೂತಿಯು ಬಂದಿರುವನು. ಆತನನ್ನು ಕರೆಯಿಸು.

ರಾಜ—ದೇವಿ ಹೇಳಿದಹಾಗೆಯೇ ಆಗಲಿ. (ವಸಂತಕನನ್ನು ಕುರಿತು) ವಸಂತಕನೇ ! ವಸುಭೂತಿಯನ್ನು ನೀನೇ ಇದಿರುಗೊಂಡು ಕರೆದುಕೊಂಡು ಬಾ.

ವಿದೂ—ಅಪ್ಪಣೆ. (ಕರೆತರುವನು)

ವಸುಭೂತಿ—ಮಹಾರಾಜನೆ ! ನಿನಗೆ ವಿಜಯವಾಗಲಿ.

ರಾಜ—ವಸುಭೂತಿಯೇ ! ಈ ಪೀಠವನ್ನಲಂಕರಿಸು.

ವಾಸವ—ಆರ್ಯನೆ ! ನಮಸ್ಕರಿಸುವೆನು.

ವಸು—ಆಯುಷ್ಮಂತೆ! ವತ್ಸರಾಜನಂತಹ ಪುತ್ರನನ್ನು ಪಡೆ.

ರಾಜ—ಆರ್ಯವಸುಭೂತಿಯೆ! ಪೂಜ್ಯನಾದ ಸಿಂಹಳೇಂದ್ರನಿಗೆ ಕುಶಲವೆ?

ವಸು—(ನಿಟ್ಟುಸಿರುಬಿಟ್ಟು) ಮಹಾರಾಜನೆ! ಏನೆಂದು ವಿಜ್ಞಾಪಿಸಲಿ? ನನಗೇನೂ ತೋರದಿರುವುದು.

ವಾಸವ—(ಭಯದಿಂದ) ಇದೇನು! ಈತನು ಹೀಗೆಹೇಳುವನು!

ರಾಜ—ಎಲೈ ವಸುಭೂತಿಯೆ! ಏಕಿಷ್ಟು ವ್ಯಾಕುಲನಾಗಿರುವೆ? ಅದೇನು?

ವಸು—ಎಲೈ ಮಹಾರಾಜನೆ! ಮಂದಭಾಗ್ಯನಾದ ನಾನು ಏನು ಹೇಳಲಿ? ಆದರೂ ವಿಜ್ಞಾಪಿಸುವೆನು. ನಮ್ಮ ಮಹಾರಾಜನ ಪುತ್ರಿಯಾದ ರತ್ನಾವಳಿಯನ್ನು ಕುರಿತು ಒಬ್ಬ ಸಿದ್ಧಪುರುಷನು ಈಕೆಯನ್ನು ಮದುವೆಯಾದವನು ಚಕ್ರವರ್ತಿಯಾಗುವನೆಂದು ಹೇಳಿದ್ದನು. ಅದನ್ನು ನಂಬಿ ನಿಮ್ಮ ಅಮಾತ್ಯಯೌಗಂಧರಾಯಣನು ತಮಗಾಗಿ ಆ ಕನ್ಯೆಯನ್ನು ಪ್ರಾರ್ಥಿಸಿದನು. ಅದಕ್ಕೆ ಸಿಂಹಳೇಂದ್ರನು, ವಾಸವದತ್ತೆಗೆ ಮನೋವಿಷಾದವುಂಟಾಗುವುದೆಂದೆಣಿಸಿ ಕೊಡಲಿಲ್ಲವು.

ರಾಜ—(ಮರೆಯಾಗಿ) ಎಲೆದೇವಿ! ಇದೇನು ಈತಹೇಳುವುದು?

ವಾಸವ—ಅದೇನೋ, ನನಗೆ ತಿಳಿಯದು. ನಾನೂ ಆ ಸಂಗತಿಯನ್ನು ಕೇಳಲಿಚ್ಛಯಿಸುವೆನು.

ವಿದೂ—ಆಯಿತು. ಆಕುವರಿಯೇನಾದಳು?

ವಸು—ಆಮೇಲೆ ವಾಸವದತ್ತೆಯು ಲಾವಣಿಕಾಗ್ನಿಯಲ್ಲಿ ಉರಿದುಹೋದಳೆಂಬ ಪ್ರವಾದವನ್ನು ಹುಟ್ಟಿಸಿ, ಪುನಃ ಸಿಂಹಳೇಂದ್ರನೆಡೆಗೆ ಯೌಗಂಧರಾಯಣನು ಬಾಭ್ರವ್ಯನನ್ನು ಕಳುಹಿಸಿ, ರತ್ನಾವಳಿಯನ್ನು ಪ್ರಾರ್ಥಿಸಿದನು. ಅದಕ್ಕೆ ನಮ್ಮ ಸಿಂಹಳೇಂದ್ರನು ಇಲ್ಲಿನ ಸಂಬಂಧ ತಪ್ಪಿಹೋಗಬಾರದೆಂದು ರತ್ನಾವಳಿಯನ್ನು ಹಡಗೇರಿಸಿ ನಮ್ಮ ಸಂಗಡ ಕಳುಹಿಸಿದನು. ಆ ಹಡಗು ಒಡೆದು ಆಕೆಯು ಮುಳುಗಿಹೋದಳು. (ಎಂದು ರೋದಿಸುತ್ತಾ ನಿಲ್ಲುವನು.)

ವಾಸ—ಹಾ! ತಂಗಿ! ಲಲಿತಾಂಗಿ! ಹಾ! ಹಾ! ರತ್ನಾವಳಿ! ಹೋದೆಯಾ? ನನಗೆ ಪ್ರತ್ಯುತ್ತರವನ್ನು ಕೊಡಲೊಲ್ಲೆಯಾ?

ರಾಜ—ದೇವಿ! ಸೈರಿಸುಸೈರಿಸು; ಸಮುದ್ರದಲ್ಲಿ ಮುಳುಗಿಹೋದವರು ಪುನಃ ಬದುಕಿಬರುವರೇ—ಎಂಬ ಸಂದೇಹವನ್ನು ಬಿಡು. ಅವಳಂತೆಯೇ ಸಮುದ್ರದಲ್ಲಿ ಮುಳುಗಿಹೋಗಿ ಮರಳಿ ಬದುಕಿ ಬಂದವರೆಷ್ಟೋ ಮಂದಿಯಿರುವುದೇ ಸಾಕ್ಷಿಯಲ್ಲವೇ?

ವಾಸವ—ಹಾಗೆಯೇಸರಿ. ಆದರೆ ಅಂತಹ ಸುಕೃತ ನನಗೆಲ್ಲಿಯದು?

(ತೆರೆಯಲ್ಲಿ ಕೋಲಾಹಲವಾಗುವುದು) ಅಯ್ಯೋ! ಕೆಟ್ಟೆವು ಕೆಟ್ಟೆವು! ಉರಿ ಉರಿ! ಮನೆಯೆಲ್ಲಾ ಸುಟ್ಟುಹೋಯಿತು. ದಳ್ಳುರಿಯು ಅಂತಃಪುರಕ್ಕೆ ನುಗ್ಗಿತು.

ರಾಜ—(ಗಾಬರಿಯಿಂದ) ಓಹೋ! ದೇವಿಯು ದಳ್ಳುರಿಗೆ ಸಿಕ್ಕಿದಳೋ ಏನೋ?

ವಾಸವ—ಮಹಾರಾಜನೇ! ರಕ್ಷಿಸು.

ರಾಜ—ಎಲೆದೇವಿ! ಈ ಕಳವಳದಿಂದ ಪಕ್ಕದಲ್ಲಿರುವ ನಿನ್ನನ್ನು ಮರೆತೆನು. (ತಬ್ಬಿಕೊಂಡು) ದೇವಿ! ಹೆದರಬೇಡ, ಸೈರಿಸು ಸೈರಿಸು.

ವಾಸವ—ಆರ್ಯಪುತ್ರನೆ! ನನಗಾಗಿ ನಾನು ಹೆದರತಕ್ಕವಳಲ್ಲ, ನಿರ್ದಯಳಾದ ನಾನು ಸಾಗರಿಕೆಯನ್ನು ಸೆರೆಯಲ್ಲಿ ಹಾಕಿದ್ದೆನು. ಅವಳು ಅಗ್ನಿಯಲ್ಲಿ ಬೀಳದಂತೆ ಕಾಪಾಡೆಂದು ಹೇಳಿದೆನು.

ರಾಜ—ಏನು? ಏನು? ಸಾಗರಿಕೆ ಅಳಿಯುವಳೇ? ಇದೊ, ನಾನು ಹೋಗಿ ಕಾಪಾಡುವೆನು.

ವಸು—ಮಹಾರಾಜನೆ, ಇದೇನು ಅಕಾರಣವಾಗಿ ಪತಂಗದ ರೀತಿಯನ್ನು ಅಂಗೀಕರಿಸುವೆ?

ವಿದೂ—ಮಿತ್ರನೆ, ವಸುಭೂತಿ ಹೇಳಿದುದು ಯುಕ್ತ. ನಿಲ್ಲುನಿಲ್ಲು. (ಪಂಚೆಯನ್ನು ಹಿಡಿದು ನಿಲ್ಲಿಸುವನು)

ರಾಜ—ಎಲೆ ಮೂಢನೆ! ಬಿಡುಬಿಡು. ನನ್ನ ಪ್ರಿಯಳು ಅಗ್ನಿಗಾಹುತಿಯಾಗುವಳು. ಆಃ ಇನ್ನೇನುಗತಿ! ಉರಿಯು ಸಾಗರಿಕೆಯ ಸಮೀಪವನ್ನು ಸೇರಿತು. ಬೇಗನೆ ಹೋಗಿ ಆಕೆಯನ್ನು ಸೆಳೆತರುವೆನು. (ಒಳಕ್ಕೆ ನುಗ್ಗುವನು)

ವಾಸವ—ಇನ್ನೇನುಗತಿ! ದುಃಖಕಾರಿಣಿಯಾದ ನನ್ನ ಮಾತಿನಿಂದಲ್ಲವೆ ಆರ್ಯಪುತ್ರನು ಕಿಚ್ಚಿನೊಳಕ್ಕೆ ನುಗ್ಗಿದುದು. ನಾನೂ ಆತನನ್ನೇ ಅನುಸರಿಸುವೆನು. (ನುಗ್ಗುವಳು)

ವಿದೂ—ದೇವಿ, ನಾನೂ ನಿನಗೆ ದಾರಿತೋರಿಸುತ್ತ ಬರುವೆನು. (ನುಗ್ಗುವನು).

ವಸು—ಇದೊ, ಮಹಾರಾಜನು ಕಿಚ್ಚಿನೊಳಕ್ಕೆ ನುಗ್ಗಿದನು. ನಮ್ಮ ರಾಜಪುತ್ರಿಯೂ ಹೋದಳು. ಇನ್ನು ಮಾಡುವುದೇನು, ನಾನೂ ಅಗ್ನಿಗೆ ಅಂಗವನ್ನು ಆಹುತಿಗೈಯ್ಯುವೆನು (ನುಗ್ಗುವನು)

ರಾಜ—ಎಲೆ ಭೀರುವೆ! ಭಯಪಡಬೇಡ. (ಸಾಗರಿಕೆಯನ್ನು ತಬ್ಬಿಕೊಂಡುಬಂದು)

ಕಂದ ॥ ಕಡೆಗಂಡುದರಿಂ ನಿನ್ನೀ
ವೊಡಲಂ ಸಲೆಸೋಂಕಿದೆನ್ನಹೃತ್ಸಂತಾಪಂ ॥
ಮಡದೀ ನಿನ್ನೊಡಲಂ ಸಂ
ಗಡಿಸಿದೊಡಂ ವಹ್ನಿನಿನ್ನ ಸುಡಲಾರ್ಪನೆ ಪೇಳ್ ॥

(ಸುತ್ತಲೂ ನೋಡಿ ಸಾಗರಿಕೆಯನ್ನು ಬಿಟ್ಟು) ಆಶ್ಚರ್ಯ! ಆಶ್ಚರ್ಯ!

ಕಂದ ॥ ಉರಿವನಲನುಡುಗಿತಂತಃ।
ಪುರಮಿಗೆ ಮೊದಲಂತೆ ರಾಣಿಯಿವಳಾಪ್ತನಿವಂ ॥
ಅರರೆ! ವಸುಭೂತಿಕಂಚುಕಿ।
ಯರಿವರಿದೇಂ ಕನಸೊ ಇಂದ್ರಜಾಲವೊಕಾಣೆಂ ॥

ವಿದೂ—ಮಿತ್ರನೆ! ಸಂಶಯಪಡಬೇಡ; ಇದು ನಿಜವಾಗಿ ಇಂದ್ರಜಾಲವೇಅಹುದು, ಆ ತೊತ್ತಿನಮಗನಾದ ಇಂದ್ರಜಾಲಿಕನು ಇನ್ನೊಂದು ಆಶ್ಚರ್ಯಕರವಾದ ವಿದ್ಯೆಯನ್ನು ತೋರಿಸುವೆನು, ಅದನ್ನು ದೇವರು ಅವಶ್ಯಕವಾಗಿ ನೋಡಬೇಕೆಂದು ಮೊದಲೇ ಹೇಳಿದ್ದನಷ್ಟೆ? ಇದೇ ಅವನ ವಿದ್ಯೆ.

ರಾಜ—ಅಹುದು ಅಹುದು, (ದೇವಿಯನ್ನು ನೋಡಿ) ಎಲೆದೇವಿ, ನಿನ್ನಮಾತಿಗಾಗಿ ಸಾಗರಿಕೆಯನ್ನು ಉರಿಯಿಂದ ಎತ್ತಿಕೊಂಡುಬಂದೆನು.

ವಾಸವ—ಅಹುದು ಅಹುದು, ಆರ್ಯಪುತ್ರನೆ! ಎಲ್ಲವನ್ನೂ ಬಲ್ಲೆನು.

ವಸು—(ಸ್ವಗತ) ಆಃ! ಈ ಕನ್ಯೆಯನ್ನು ನೋಡಲು ನಮ್ಮ ರಾಜಪುತ್ರಿಯಂತೆ ಕಾಣುವಳು. ಒಳ್ಳೆಯದು ವಿಚಾರಿಸುವೆನು. (ಪ್ರಕಾಶ) ಮಹಾರಾಜನೆ! ಈ ಕನ್ಯೆ ಎಲ್ಲಿಂದಬಂದಳು?

ರಾಜ—ಇದನ್ನು ದೇವಿಯು ಬಲ್ಲಳು.

ವಾಸವ—ಆರ್ಯ ವಸುಭೂತಿಯೇ! ಈ ಸಾಗರಿಕೆಯು ಸಮುದ್ರದಲ್ಲಿ ಸಿಕ್ಕಿದಳೆಂದು ಹೇಳಿ, ಅಮಾತ್ಯ ಯೌಗಂಧರಾಯಣನು ತಂದು ನನಗೆ ಸಮರ್ಪಿಸಿದನು. ಸಾಗರದಲ್ಲಿ ದೊರೆತಳಾದುದರಿಂದ ಇವಳನ್ನು ಸಾಗರಿಕೆಯೆಂದು ಕರೆಯುವೆವು.

ವಸು—ಈವಸಂತಕನ ಕೊರಳಿನಲ್ಲಿರುವ ರತ್ನಮಾಲಿಕೆಯಿಂದಲೂ, ಈ ಕನ್ಯೆ ಸಮುದ್ರದಲ್ಲಿ ಸಿಕ್ಕಿದಳೆಂಬುದರಿಂದಲೂ ಈಕೆ ನಮ್ಮ ಸಿಂಹಳೇಂದ್ರನ ಮಗಳಾದ ರತ್ನಾವಳಿಯೇ ನಿಶ್ಚಯ.

ಸಾಗ—ಹಾ! ತಾಯೆ! ಹಾ! ತಂದೆಯೇ! ನೀವೆಲ್ಲಿರುವಿರಿ? ನನಗೆ ಪ್ರತ್ಯುತ್ತರವನ್ನು ಕೊಡಲಾಗದೆ? (ಮೂರ್ಛೆಹೋಗುವಳು).

ವಾಸವ—(ಕಂಬನಿದುಂಬಿ) ಅಯ್ಯಾ, ವಸುಭೂತಿಯೇ! ಈ ಕನ್ಯೆಯು ನನ್ನ ತಂಗಿಯಾದ ರತ್ನಾವಳಿಯೇ?

ವಸು—ತಾಯೆ, ಅಹುದು.

ವಾಸವ—(ತಬ್ಬಿಕೊಂಡು) ಎಲೆ ತಂಗಿ, ಸಂತೈಸಿಕೊ.

ರಾಜ—ಇವಳು ಮಹಾರಾಜಕುಲ ಪ್ರಸೂತನಾದ ಸಿಂಹಳೇಂದ್ರನ ಕುಮಾರಿಯೆ?

ವಿದೂ—(ರತ್ನಮಾಲಿಕೆಯನ್ನು ನೋಡಿಕೊಂಡು) ಮೊದಲೇ ನಾನು ಇಂತಹ ಆಭರಣವು ಸಾಮಾನ್ಯ ಜನಕ್ಕೆ ಎಲ್ಲಿ ದೊರೆದೀತೆಂದು ಯೋಚಿಸಿದೆ.

ವಾಸವ—ಎಲೆತಂಗಿ! ಮರುಗಬೇಡ. ಸ್ಥೈರಿಸು.

ವಸು—ಎಲೆ ರಾಜಪುತ್ರಿ! ಈಕೆ ನಿಮ್ಮ ಅಕ್ಕನು, ಬಹಳವಾಗಿ ಅಳುವಳು, ಈಕೆಯನ್ನು ತಕ್ಕಯಿಸು.

ಸಾಗ—(ಸಂತಯಿಸಿಕೊಂಡು ಮಹಾರಾಜನನ್ನು ಓರೆಗಣ್ಣಿನಿಂದ

ನೋಡಿ) ದೇವಿಗೆ ಇಷ್ಟು ಅಪರಾಧವನ್ನು ಮಾಡಿ ಪುನಃ ಆಕೆಯ ಮುಖ ವನ್ನು ನಾನು ಹೇಗೆ ನೋಡಲಿ ?

ವಾಸವ—(ಕಂಬನಿದುಂಬಿ ತೋಳನೀಡಿ) ಇನ್ನಾದರೂ ನಿನ್ನ ಗಡಸುಗಾತಿತನವನ್ನು ಬಿಟ್ಟು ಒಡಹುಟ್ಟಿದ ಮರುಕವನ್ನು ತೋರಿಸು. (ಆಲಿಂಗಿಸುವಳು).

ಸಾಗ—(ತತ್ತರಿಸುವಳು)

ವಾಸವ—ಆರ್ಯಪುತ್ರನೆ ! ನನ್ನ ಕೇಡಿಗತನವು ನನ್ನನ್ನು ನಾಚಿಸು ತ್ತಿರುವುದು. ನೀನೇ ಈಕೆಯ ಸಂಕಲೆಯನ್ನು ಸಡಲಿಸಿಬಿಡು.

ರಾಜ—(ಸಂತೋಷದಿಂದ) ಹಾಗೆಯೇ ಆಗಲಿ. (ಬಂಧನವನ್ನು ತೆಗೆಯುುವನು.)

ವಾಸವ—ಅಯ್ಯಾ, ವಸುಭೂತಿಯೆ, ನಾನು ಇಷ್ಟೆಲ್ಲಾ ದೌರ್ಜ ನ್ಯಕ್ಕೆ ಗುರಿಯಾದುದು ಅಮಾತ್ಯ ಯೌಗಂಧರಾಯಣನಿಂದಲೇ. ಆತನು ತನಗೆ ತಿಳಿದುದನ್ನು ನನಗೆ ತಿಳಿಸದೆ ಹೋದನು

ರಾಜ—ಏನು ? ಯೌಗಂಧರಾಯಣನು ತಿಳಿಸದೆ ಹೀಗೆ ನಡೆಯಿಸಿ ದನೆ ?

ಯೌಗಂಧ—(ಪ್ರವೇಶಿಸಿ) ಆಃ ! ಪತಿವಿರಹದಿಂದ ಕೋಟಲೆಗೊ ಳ್ಳುತ್ತಿದ್ದ ಸಾಗರಿಕೆಯ ಪರಿಣಯದ ಸಂತೋಷದಿಂದ ನಮ್ಮ ಮಹಾರಾ ಜನಿಗೆ ನನ್ನಮೇಲೆ ಸಂಪೂರ್ಣಾನುಗ್ರಹವು ಉಂಟಾಗಿದ್ದರೂ ಆತನಿಗೆ ಮುಖವನ್ನು ತೋರಿಸುವುದಕ್ಕೆ ನನಗೆ ನಾಚಿಕೆಯಾಗುವುದು. ಹೀಗೆ ತಾನೇ ಸ್ವಾಮಿಕಾರ್ಯವನ್ನು ಆಗಮಾಡುವ ಲವಲವಿಕೆಯು ಎಂತಹ ಯೋಗ್ಯನನ್ನಾದರೂ ಹಗರಣಗೊಳಿಸದೆ ಬಿಡುವುದಿಲ್ಲ. ಇದೊ, ಮಹಾ ರಾಜನು ಕುಳಿತಿರುವನು. ಕಾಣಿಸಿಕೊಳ್ಳುವೆನು. (ಸಮಿಾಪಕ್ಕೆ ಬಂದು) ಮಹಾರಾಜನೆ, ವಿಜಯವಾಗಲಿ, ತಮಗೆ ತಿಳಿಸದೆ ಇದೊಂದು ಕಾರ್ಯ ವನ್ನು ಮಾಡಿದೆನು. ಕ್ಷಮಿಸಬೇಕು. (ವಂದಿಸುವನು).

ರಾಜ—ಅದೇತಕ್ಕೆ ಹೀಗೆ ತಿಳಿಸದೆ ಮಾಡಿದೆ ?

ಯೌಗಂ—ಮಹಾರಾಜನೆ, ಸಾವಧಾನವಾಗಿ ಲಾಲಿಸಬೇಕು. ಸಕಲವನ್ನೂ ಬಿನ್ನವಿಸುವೆನು. ಸಿಂಹಳೇಂದ್ರನಿಗೆ ರತ್ನಾವಳಿ ಎಂಬ

ಕುಮಾರಿಯು ಇರುವಳಷ್ಟೆ ? ಆಕೆಯನ್ನು ಯಾವ ಅರಸು ಮದುವೆಯಾಗುವನೋ ಆತನು ಚಕ್ರವರ್ತಿಯಾಗುವನೆಂದು ಒಬ್ಬ ಸಿದ್ಧಪುರುಷನು ಹೇಳಿದ್ದನು. ಅದನ್ನು ನಂಬಿ ಆ ಕನ್ಯಾರತ್ನವನ್ನು ತಮಗೆ ಸೇರಿಸಬೇಕೆಂದು ಉಪಾಯಪುರಸ್ಸರವಾಗಿ ಸಿಂಹಳೇಂದ್ರನನ್ನು ಪ್ರಾರ್ಥಿಸುವಂತೆ ನಮ್ಮ ಬಾಭ್ರವ್ಯನನ್ನು ಕಳುಹಿಸಿದ್ದೆನು.

ರಾಜ—ಯೌಗಂಧರಾಯಣನೆ ! ಸಾಕು ಸಾಕು. ನಿಲ್ಲಿಸು. ಮುಂದಣ ವೃತ್ತಾಂತವನ್ನೆಲ್ಲಾ ಕೇಳಿರುವೆನು. ಆದರೆ ಯಾವ ಆಲೋಚನೆಯಿಂದ ಇವಳನ್ನು ರಾಣಿಯ ಕೈಗೆ ಕೊಟ್ಟೆ ?

ವಿದೂ—ಮಹಾರಾಜನೆ; ಅದನ್ನೇತಕ್ಕೆ ಕೇಳುವೆ ? ಹೇಳದಿದ್ದರೂ ಅದರ ನೆಲೆಯು ತಿಳಿದೇತಿಳಿಯುವುದು. ಆಕೆ ಅಂತಃಪುರದಲ್ಲಿದ್ದರೆ ಹೇಗಾದರೂ ತಮ್ಮ ಕಣ್ಣಿಗೆ ಬಿದ್ದೇಬೀಳುವಳೆಂದು.

ರಾಜ—ಯೌಗಂಧರಾಯಣನೇ ! ಇದೊ, ನಮ್ಮ ವಸಂತಕನು ನಿನ್ನ ಅಭಿಪ್ರಾಯವನ್ನು ತಿಳಿದಂತೆ ಹೇಳುವನು.

ಯೌಗಂಧ—ಮಹಾರಾಜನೆ, ಅಹುದು.

ರಾಜ—ಭಾಪು ! ಮಂತ್ರಿಯೇ ! ಭಾಪು, ಆದರೆ ಈ ಇಂದ್ರಜಾಲವೂ ನಿನ್ನ ಪ್ರಯೋಗವೇ ಆಗಿರಬಹುದು.

ಯೌಗಂ—ಅಹುದು, ಅಲ್ಲದಿದ್ದರೆ ಅಂತಃಪುರದಲ್ಲಿ ಸೆರೆಯಲ್ಲಿದ್ದ ಸಾಗರಿಕೆಯನ್ನು ಕಾಣುವುದು ಹೇಗೆ ? ಈಕೆಯನ್ನು ಕಾಣದಿದ್ದರೆ ವಸುಭೂತಿಯು ಇವಳ ಗುರುತು ಹಿಡಿದು ತಿಳಿಸುವುದು ಹೇಗೆ ?

ರಾಜ—(ನಕ್ಕು) ಇನ್ನು ತನ್ನ ತಂಗಿಯ ವಿಷಯದಲ್ಲಿ ಏನು ನಡೆಯಿಸತಕ್ಕುದೋ ಅದನ್ನು ದೇವಿ ತಾನೇ ಬಲ್ಲಳು.

ವಾಸವ—(ನಕ್ಕು) ಆರ್ಯಪುತ್ರನೆ ! ರತ್ನಾವಳಿಯನ್ನು ನನಗೆ ಕೊಡೆಂದು ನನ್ನೊಡನೆ ಮೊದಲೇ ಏತಕ್ಕೆ ಹೇಳದಿದ್ದೆ?

ವಿದೂ— ದೇವಿ, ಮಹಾರಾಜನ ಮನಸ್ಸನ್ನು ಚೆನ್ನಾಗಿ ತಿಳಿದೆ.

ವಾಸವ—ಎಲೆತಂಗಿ, ರತ್ನಾವಳಿ, ಇಲ್ಲಿಬಾ. ನನ್ನ ತಂಗಿಯಾದುದಕ್ಕೆ ತಕ್ಕ ಪದವಿಯನ್ನು ಅನುಭವಿಸು. (ತನ್ನ ಆಭರಣಗಳಿಂದ ಅಲಂಕರಿಸಿ ರಾಜನಬಳಿಗೆ ಕರೆತಂದು) ಆರ್ಯಪುತ್ರನೆ! ಇದೊ, ರತ್ನಾವಳಿಯನ್ನು ಕೈಹಿಡಿದು ಕಾಪಾಡು.

ರಾಜ—(ಕೈನೀಡಿ) ದೇವಿಯು ಕೊಡುವ ಬಹುಮತಿಯನ್ನು ಹೇಗೆತಾನೇ ಪರಿಗ್ರಹಿಸದೆ ಇರಲಿ.

ವಾಸವ—(ಕಂಬನಿದುಂಬಿ) ಆರ್ಯಪುತ್ರನೆ! ಈಕೆಯ ತಾಯಿತಂದೆ ದೂರದಲ್ಲಿರುವರು. ಈಕೆಯು ಅವರನ್ನು ನೆನಸಿಕೊಂಡು ಮರುಗ ದಂತೆ ಇವಳನ್ನು ಕಾಪಾಡು. (ರತ್ನಾವಳಿಯನ್ನು ರಾಜನಕೈಗೆ ಒಪ್ಪಿಸು ವಳು)

ರಾಜ—ನೀನು ಹೇಗೆ ಅಜ್ಞಾಪಿಸುವೆಯೋ ಹಾಗೆಯೇ ನಡೆಯಿ ಸುವೆನು.

ಯೌಗಂಧ—ಮಹಾರಾಜನೆ, ಈಗ ಸಕಲವಾದ ಭೂಮಿಯೂ ನಿನ್ನ ಕೈವಶವಾದುದಲ್ಲದೆ ಈ ರಾಣಿಯೆಂಬ ರಮೆಯೂ ಕೈಸೇರಿದಳು (ಸ್ವಗತ) ನಾನು ಪಟ್ಟ ಶ್ರಮವೂ ಸಫಲವಾಯಿತು. (ಪ್ರಕಾಶ) ಮಹಾ ರಾಜನೆ, ನಿನಗೆ ಇನ್ನಾವ ಪ್ರಿಯವನ್ನುಂಟುಮಾಡಲಿ?

ರಾಜ—ಎಲೈ ಯೌಗಂಧರಾಯಣನೆ, ಇದಕ್ಕಿಂತಲೂ ಬೇಕಾ ದುದು ಮತ್ತೇನು?

॥ ರಾಗ ॥ ಕಮಾಚು ॥

ಅಂತೆನಿಂತು ಮಂತ್ರಿವರ್ಯನೆ । ಸಂತೋಷವನಾ ॥ ಪ ॥
ಪೊಡವಿಯೇಕಾಧಿಪತ್ಯ । ದೊಡೆತನವನು ನೀಡಲಾರ್ಪ ।
ಮಡದಿರನ್ನೆ ಸಾಗರಿಕೆ । ಪಿಡಿದಳೆನ್ನ ಪಾಣಿತಲವ ॥ ೧ ॥
ಸೋದರಿಯನು ಪಡೆದೆನೆಂಬ । ಮೋದವಾಯ್ತು ದೇವಿಗೆನಗೆ ।
ಮೇದಿನಿಯೊಳು ಕೋಸಲಜಯ । ವಾದುದಿನ್ನೇಂಬಯಕೆಪೇಳ್ಳೈ ॥ ೨ ॥

ನಾಲ್ಕನೆಯಂಕಂ ಸಂಪೂರ್ಣಂ.

---

ರತ್ನಾವಳೀ ನಾಟಿಕೆ ಮುಗಿದುದು.

